KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜುಲೈ ೯, ೨೦೦೯ (ಆಷಾಢ ೧೮, ಶಕ ವರ್ಷ ೧೯೩೧) | ಸಂಚಿಕೆ ೨೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಆರ್. ರಮೇಶಪ್ಪ ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ ಹಾಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ಇವರು ಆದಾಯ ಮೀರಿ ಸಂಪತ್ತು ಹೊಂದಿರುವ ಕುರಿತು ಸಕ್ಷಮ ನ್ಯಾಯಾಲಯದಲ್ಲಿ (ಅಟ್ಯಾಚ್‌ಮೆಂಟ್) ಜಪ್ತಿ ಮಾಡಲು ನೀಡಿದ ಅನುಮತಿಯ ಆದೇಶಕ್ಕೆ ತಿದ್ದುಪಡಿ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ:ಸಿಆಸುಇ 20 ಕೆಇಪಿ 2008 ಬೆಂಗಳೂರು ದಿ: 19ನೇ ಮಾರ್ಚ್ 09.
2. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಪತ್ರ ಸಂ: ಲೋಕ್:ಐಎನ್‌ವಿ(ಜಿ):ಸಿಟಿ:ಕ್ರೈಂ.40 2006 ದಿ:30.03.2009.

**ಪ್ರಸ್ತಾವನೆ:**

ಶ್ರೀ ಆರ್. ರಮೇಶಪ್ಪ, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಹಾಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ಇವರು ತಮ್ಮ ಬಲ್ಲ ಆದಾಯ ಮೂಲಕ್ಕಿಂತ ಹೆಚ್ಚಿನ ಆಸ್ತಿ ಪಾಸ್ತಿಗಳನ್ನು ಹೊಂದಿರುವುದು ಧೃಡಪಟ್ಟಿದ್ದು. ಅವರು ಈ ಎಲ್ಲಾ ಆಸ್ತಿ ಪಾಸ್ತಿಗಳನ್ನು ವಿಲೇವಾರಿ ಮಾಡಬಹುದು ಎಂಬ ಗುಮಾನಿ ಇರುವುದರಿಂದ, ಕ್ರಿಮಿನಲ್ ಲಾ(ಅಮೆಂಡ್‌ಮೆಂಟ್) ಅಧ್ಯಾದೇಶ (ಆರ್ಡಿನೆನ್ಸ್) 1944 ರ ಕಲಂ 3 ರಡಿ ಇವುಗಳನ್ನು ಜಪ್ತಿ (ಅಟ್ಯಾಚ್‌ಮೆಂಟ್) ಮಾಡುವ ಸಲುವಾಗಿ ಸಕ್ಷಮ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಲು ಸರ್ಕಾರದ ಅನುಮೋದನೆಯನ್ನು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ಮೇಲೆ ಓದಲಾದ ಕ್ರಮ ಸಂ.(1) ಆದೇಶದಲ್ಲಿ ನೀಡಲಾಗಿದೆ. ಮೇಲೆ ಓದಲಾದ ಕ್ರಮ ಸಂ.(2) ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಸದರಿ ಆದೇಶದ ಅನುಬಂಧದ ಮೊದಲನೇ ಪುಟದ ಕ್ರಮ ಸಂ:4ರ ಮೂರನೇ ಅಂಕಣದಲ್ಲಿ ದಿ:24.03.05 ಎಂದು ತಪ್ಪಾಗಿ ನಮೂದಿಸಿರುವುದನ್ನು ದಿ:22.01.2001 ಎಂಬುದಾಗಿ ಹಾಗೂ ಅನುಬಂಧದ 2ನೇ ಪುಟದ ಕ್ರಮ ಸಂ:11ರ ಮೂರನೇ ಅಂಕಣದಲ್ಲಿ ದಿ:12.04.06 ಎಂದು ತಪ್ಪಾಗಿ ನಮೂದಿಸಿರುವುದನ್ನು ದಿ:12.04.2000 ಎಂದು ಸರಿಯಾಗಿ ನಮೂದಿಸಿ ಪರಿಷ್ಕೃತ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ತಿದ್ದುಪಡಿ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂ:ಸಿಆಸುಇ 20 ಕೆಇವಿ 2008, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸರ್ಕಾರಿ ಆದೇಶ ಸಂ:ಸಿಆಸುಇ 20 ಕೆಇವಿ 2008 ದಿ:19.03.2009ರ ಆದೇಶದಲ್ಲಿನ ಅನುಬಂಧದ ಕ್ರಮ ಸಂ: 4ರ ಅಂಕಣ 3 ರಲ್ಲಿ ದಿ:24.03.2005 ಎಂದಿರುವುದನ್ನು ದಿ:22.01.2001 ಎಂದು

ಹಾಗೂ ಸದರಿ ಆದೇಶದ ಅನುಬಂಧದ ಕ್ರಮ ಸಂ:11ರ ಅಂಕಣ 3ರಲ್ಲಿ ದಿ:12.04.2006 ಎಂದಿರುವುದನ್ನು ದಿ:12.04.2000 ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1274 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2).

**ಸುತ್ತೋಲೆ**

**ಸಂಖ್ಯೆ: ಸಿಆಸುಇ 31 ಎಸ್ಎಫ್ಪಿ 2009, ಬೆಂಗಳೂರು, ದಿನಾಂಕ: 11ನೇ ಮೇ 2009**

**ವಿಷಯ:** ಐಎಫ್ಎಸ್ ಅಧಿಕಾರಿಗಳಿಗೆ ರಜೆ ಮಂಜೂರಾತಿ ಬಗ್ಗೆ.

ಅರಣ್ಯ ಇಲಾಖೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕರ್ನಾಟಕ ವೃಂದದ ಐಎಫ್ಎಸ್ ಅಧಿಕಾರಿಗಳಿಗೆ ಸಂಬಂಧಿಸಿದಂತೆ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಶ್ರೇಣಿಯವರೆಗಿನ ಅಧಿಕಾರಿಗಳಿಗೆ ರಜೆಯನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರು ಮಂಜೂರು ಮಾಡುವುದು ವಾಡಿಕೆಯಲ್ಲಿದೆ. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಶ್ರೇಣಿ ಮತ್ತು ಅದಕ್ಕೂ ಮೇಲ್ಪಟ್ಟು ಅಪೆಕ್ಸ್ ಶ್ರೇಣಿಯ ಐಎಫ್ಎಸ್ ಅಧಿಕಾರಿಗಳ ರಜೆಯನ್ನು ಸರ್ಕಾರದ ಮಟ್ಟದಲ್ಲಿ ಸಿಆಸು ಇಲಾಖೆಯು, ಅಧಿಕಾರಿಯವರ ಕೋರಿಕೆಯ ಬಗ್ಗೆ ಅರಣ್ಯ, ಪರಿಸರ ಮತ್ತು ಜೀವಶಾಸ್ತ್ರ ಇಲಾಖೆಯ ಅಭಿಪ್ರಾಯ/ಶಿಫಾರಸ್ಸನ್ನು ಪಡೆದು ರಜೆಯನ್ನು ಮಂಜೂರು ಮಾಡುತ್ತದೆ.

ಅಖಿಲ ಭಾರತ ಸೇವಾ (ರಜೆ) ನಿಯಮಗಳ ಮೇರೆಗೆ, ಅನ್ಯಸೇವೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಖಿಲ ಭಾರತ ಸೇವಾ ಅಧಿಕಾರಿಗಳಿಗೆ ಅಂದರೆ ಸಾರ್ವಜನಿಕ ಉದ್ದಿಮೆ, ಸರ್ಕಾರದ ಕಂಪನಿ, ನಿಗಮ, ಮಂಡಳಿ ಮತ್ತು ವಿಶ್ವವಿದ್ಯಾಲಯ ಹಾಗೂ ಸರ್ಕಾರಿ ಸ್ವಾಯತ್ತ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳಿಗೆ ರಜೆಯನ್ನು ಸರ್ಕಾರವೇ ಮಂಜೂರು ಮಾಡಬೇಕಾಗುತ್ತದೆ. ಆದ್ದರಿಂದ, ಇಂತಹ ಅಧಿಕಾರಿಗಳಿಗೆ ಸಂಬಂಧಿಸಿದ ರಜೆಯ ಅರ್ಜಿಗಳನ್ನು ಸಂಬಂಧಪಟ್ಟ ಕಂಪನಿ, ನಿಗಮ, ಮಂಡಳಿ ಮತ್ತು ವಿಶ್ವವಿದ್ಯಾಲಯ ಮತ್ತು ಇತರ ಸರ್ಕಾರಿ ಸಂಸ್ಥೆಗಳು ಅಧಿಕಾರಿಯವರ ರಜೆಯ ಅರ್ಜಿಯನ್ನು ಸರ್ಕಾರದ ಸಂಬಂಧಪಟ್ಟ ಆಡಳಿತ ಇಲಾಖೆಯ ಮುಖಾಂತರ ಸಿಆಸು ಇಲಾಖೆಗೆ ಸಾಕಷ್ಟು ಮುಂಚಿತವಾಗಿ ಕಳುಹಿಸತಕ್ಕದ್ದು. ಹಾಗೆ ಮಾಡುವಾಗ ರಜೆಯ ಅವಧಿಯಲ್ಲಿ ಪ್ರಭಾರ ವ್ಯವಸ್ಥೆಯ ಬಗ್ಗೆಯೂ ಸ್ಪಷ್ಟವಾಗಿ ನಮೂದಿಸತಕ್ಕದ್ದು.

ಇತ್ತೀಚೆಗೆ ಕೆಲವೊಂದು ಪ್ರಕರಣಗಳಲ್ಲಿ ವಿಶ್ವವಿದ್ಯಾಲಯಗಳಲ್ಲಿ ನಿಬಂಧಕ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಐಎಫ್ಎಸ್ ಅಧಿಕಾರಿಗಳಿಗೆ ರಜೆಯನ್ನು ವಿಶ್ವವಿದ್ಯಾಲಯದ ಉಪಕುಲಪತಿ/ಆಡಳಿತ ಮಂಡಳಿಯವರೇ ಮಂಜೂರು ಮಾಡಿರುವುದು ಮತ್ತು ಇನ್ನೂ ಕೆಲವು ಪ್ರಕರಣಗಳಲ್ಲಿ ರಜೆಯ ಅರ್ಜಿಗಳನ್ನು ವಿಳಂಬವಾಗಿ ಸಿಆಸು ಇಲಾಖೆಗೆ ಕಳುಹಿಸಿರುವ ಪ್ರಸಂಗಗಳು ಗಮನಕ್ಕೆ ಬಂದಿವೆ. ಇದಲ್ಲದೆ, ನಿಗಮ, ಮಂಡಳಿ ಸರ್ಕಾರಿ ಕಂಪನಿ, ಸಂಸ್ಥೆಗಳಲ್ಲಿ ಅನ್ಯ ಸೇವೆಯ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಐಎಫ್ಎಸ್ ಅಧಿಕಾರಿಗಳ ರಜೆಯ ಅರ್ಜಿಗಳನ್ನು ವಿಳಂಬವಾಗಿ ಮತ್ತು ಕೆಲವು ಸಂದರ್ಭಗಳಲ್ಲಿ ರಜೆಯ ಅವಧಿ ಮುಗಿದ ನಂತರ ರಜೆ ಅರ್ಜಿ ಪ್ರಸ್ತಾವನೆಗಳನ್ನು ಸಿಆಸು ಇಲಾಖೆಗೆ ಕಳುಹಿಸಿರುವ ಪ್ರಸಂಗಗಳು ಗಮನಕ್ಕೆ ಬಂದಿವೆ. ಯಾವುದೇ ಅಧಿಕಾರಿಯು ರಜೆಯ ಮೇಲೆ ತೆರಳುವುದಕ್ಕಿಂತ ಮುಂಚೆ ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ/ಮಂಜೂರಾತಿ ಪಡೆಯುವುದು ಅಗತ್ಯವಾಗಿರುತ್ತದೆ. ಹಾಗೆ ಮಾಡದಿದ್ದಲ್ಲಿ ಸಂಬಂಧಪಟ್ಟ ಅಧಿಕಾರಿಗಳು ಕರ್ತವ್ಯ ಲೋಪ ಎಸಗಿದಂತಾಗುತ್ತದೆ ಹಾಗೂ ಅವರು ಶಿಸ್ತುಕ್ರಮಕ್ಕೆ ಅರ್ಹರಾಗುತ್ತಾರೆ. ಅಂತಹ ಪ್ರಕರಣಗಳು ಪುನರಾವರ್ತನೆ ಆಗುತ್ತಿದ್ದಲ್ಲಿ ಸಂಬಂಧಪಟ್ಟ ಅಧಿಕಾರಿಗಳಿಗೆ ವೇತನರಹಿತ ರಜೆ ಎಂದು ಪರಿಗಣಿಸಬೇಕಾಗುತ್ತದೆ. ಮತ್ತು ಶಿಸ್ತುಕ್ರಮವನ್ನು ಜರುಗಿಸುವ ಬಗ್ಗೆಯೂ ಪರಿಗಣಿಸಬೇಕಾಗುತ್ತದೆ. ಇದಲ್ಲದೆ, ಅಧಿಕಾರಿಗಳ ರಜೆಯ ಅರ್ಜಿಗಳನ್ನು ವಿಳಂಬವಾಗಿ ಸಿಆಸು ಇಲಾಖೆಗೆ ಕಳುಹಿಸುವ ಸಂಬಂಧಪಟ್ಟ ಆಡಳಿತ ಇಲಾಖೆಗಳನ್ನೂ ಹೊಣೆಗಾರರನ್ನಾಗಿ ಮಾಡಬೇಕಾಗುತ್ತದೆ. ಆದ್ದರಿಂದ, ಇನ್ನು ಮುಂದೆ ಅನ್ಯ ಸೇವೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು ತಮ್ಮ ರಜೆಯ ಅರ್ಜಿಗಳನ್ನು ಸಂಬಂಧಪಟ್ಟ ಆಡಳಿತ ಇಲಾಖೆಗಳ ಮೂಲಕ ಸಾಕಷ್ಟು ಮುಂಚಿತವಾಗಿ ಸಿಆಸು ಇಲಾಖೆಗೆ ಕಳುಹಿಸತಕ್ಕದ್ದು. ಮತ್ತು ಸರ್ಕಾರದ ಪೂರ್ವಾನುಮತಿ/ಮಂಜೂರಾತಿ ಇಲ್ಲದೇ ರಜೆಯ ಮೇಲೆ ತೆರಳಬಾರದೆಂದು ಈ ಮೂಲಕ ತಿಳಿಸಲಾಗಿದೆ. ತಪ್ಪಿದಲ್ಲಿ, ಮೇಲೆ ತಿಳಿಸಿದಂತೆ ಅವರನ್ನು ಹೊಣೆಗಾರರನ್ನಾಗಿ ಮಾಡಲಾಗುವುದೆಂದು ಈ ಮೂಲಕ ಸ್ಪಷ್ಟ ಪಡಿಸಲಾಗಿದೆ.

ಈ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದೆಂದು ಅಧಿಕಾರಿಗಳಿಗೆ ಮತ್ತು ಆಡಳಿತ ಇಲಾಖೆಗಳಿಗೆ ಈ ಮೂಲಕ ತಿಳಿಸಲಾಗಿದೆ.

**ಕೆ.ಆರ್. ಶ್ರೀನಿವಾಸ**

ಪಿ.ಆರ್. 1275 ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ನೀಡಲಾಗಿರುವ ಆಡಳಿತಾತ್ಮಕ ಮತ್ತು ತಾಂತ್ರಿಕ ಅನುಮೋದನೆ ನೀಡುವ ಅಧಿಕಾರವನ್ನು ಪರಿಷ್ಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ.ಗ್ರಾಅಪ.05.ಉಖಾಯೋ.2008 ಬೆಂಗಳೂರು, ದಿನಾಂಕ: 2.1.2009.

2. ರಾಜ್ಯ ಉದ್ಯೋಗ ಖಾತರಿ ಪರಿಷತ್ ಸಭೆ ದಿನಾಂಕ:07.01.2009.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ಆದೇಶ (1) ರಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದರಡಿ ಅನುಷ್ಠಾನಗೊಳಿಸುವ ಕಾಮಗಾರಿಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಹಾಗೂ ತಾಂತ್ರಿಕ ಅನುಮೋದನೆ ನೀಡಲು ವಿವಿಧ ಸಕ್ಷಮ ಪ್ರಾಧಿಕಾರಿಗಳಿಗೆ ಅಧಿಕಾರದ ಮಿತಿ ನಿಗದಿಪಡಿಸಲಾಗಿರುತ್ತದೆ. ಈ ಸಂಬಂಧ ಮೇಲೆ ಓದಲಾದ ರಾಜ್ಯ ಉದ್ಯೋಗ ಖಾತರಿ ಪರಿಷತ್ ಸಭೆಯಲ್ಲಿ ಯೋಜನೆಯ ಕಾಮಗಾರಿಗಳನ್ನು ಗ್ರಾಮ ಮಟ್ಟದಲ್ಲಿ ತ್ವರಿತವಾಗಿ ಅನುಷ್ಠಾನಗೊಳಿಸಲು, ಕ್ರಮ ಕೈಗೊಳ್ಳಬೇಕಾಗಿದ್ದು ಮೇಲೆ ಓದಲಾದ ಸರ್ಕಾರದ ಆದೇಶ (1)ರಲ್ಲಿ ಈಗಾಗಲೇ ನೀಡಲಾಗಿರುವ ಅಧಿಕಾರದ ಮಿತಿಯನ್ನು ಪರಿಷ್ಕರಿಸುವುದು ಸೂಕ್ತವೆಂದು ಮತ್ತು ಈ ಯೋಜನೆಗೆ ಸಂಬಂಧಪಟ್ಟ ಯಾವುದೇ ಕಾಮಗಾರಿಯ ಅಂದಾಜು ಪಟ್ಟಿಗೆ ತಾಂತ್ರಿಕ ಮತ್ತು ಆಡಳಿತಾತ್ಮಕ ಅನುಮೋದನೆ ನೀಡುವ ಪೂರ್ಣ ಅಧಿಕಾರವನ್ನು ತಾಲ್ಲೂಕು ಮಟ್ಟದ ಅಧಿಕಾರಿಗಳಿಗೆ ನೀಡಬೇಕೆಂದು ಅಭಿಪ್ರಾಯಪಡಲಾಗಿದೆ. ಆದುದರಿಂದ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ಗ್ರಾಅಪ.05.ಉಖಾಯೋ.2009, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2009**

ಮೇಲಿನ ಪ್ರಸ್ತಾವನೆಯಲ್ಲಿ ತಿಳಿಸಿರುವ ಎಲ್ಲಾ ಅಂಶಗಳನ್ನು ಪರಿಗಣಿಸಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಕೈಗೆತ್ತಿಕೊಳ್ಳುವ ಕಾಮಗಾರಿಗಳ ಅಂದಾಜುಗಳಿಗೆ ವಿವಿಧ ಸಕ್ಷಮ ಪ್ರಾಧಿಕಾರಗಳಿಂದ ತಾಂತ್ರಿಕ ಮತ್ತು ಆಡಳಿತಾತ್ಮಕ ಅನುಮೋದನೆಗಾಗಿ ಮಿತಿಯನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಆದೇಶಿಸಿದೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಕೈಗೆತ್ತಿಕೊಳ್ಳುವ ಯಾವುದೇ ಕಾಮಗಾರಿಯ ಸಂಬಂಧ ಆಯಾ ಇಲಾಖೆಗೆ ಸಂಬಂಧಪಟ್ಟ ಹೋಬಳಿ ಮತ್ತು ತಾಲ್ಲೂಕು ಮಟ್ಟದ ಅಧಿಕಾರಿಗಳು ಈ ಆದೇಶದಲ್ಲಿನ ಅಧಿಕಾರದನ್ವಯ ಯೋಜನೆಯನ್ನು ಅನುಷ್ಠಾನಗೊಳಿಸಬಹುದಾಗಿರುತ್ತದೆ ಮತ್ತು ಇದಕ್ಕಾಗಿ ಪ್ರತ್ಯೇಕವಾಗಿ ಆಯಾ ಇಲಾಖೆಗಳಿಂದ ಯಾವುದೇ ಆದೇಶ ಹೊರಡಿಸುವ ಅಗತ್ಯವಿರುವುದಿಲ್ಲ.

**ತಾಂತ್ರಿಕ ಅನುಮೋದನೆ:**

ಎಲ್ಲಾ ಕಾಮಗಾರಿಗಳ ಸಂಬಂಧ ಯಾವುದೇ ಇಲಾಖೆಯ ಹೋಬಳಿ ಮಟ್ಟದ ಅನುಷ್ಠಾನಾಧಿಕಾರಿಗಳು ರೂ.10.00 ಲಕ್ಷ (ರೂ. ಹತ್ತು ಲಕ್ಷ) ದವರೆಗೆ (ಹೋಬಳಿ ಮಟ್ಟದ ಅನುಷ್ಠಾನಾಧಿಕಾರಿಗಳು ಎಂದರೆ ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆಯ ಕಿರಿಯ/ಸಹಾಯಕ ಅಭಿಯಂತರರು, ತೋಟಗಾರಿಕೆ ಇಲಾಖೆಯ ಸಹಾಯಕ ತೋಟಗಾರಿಕೆ ಅಧಿಕಾರಿಗಳು ಮತ್ತು ಇತ್ಯಾದಿ) ಮತ್ತು ರೂ.10.00 ಲಕ್ಷ (ರೂ. ಹತ್ತು ಲಕ್ಷ) ಕ್ಕೂ ಮೇಲ್ಪಟ್ಟು ಆಯಾ ಇಲಾಖೆಗಳ ತಾಲ್ಲೂಕು ಮಟ್ಟದ ಅನುಷ್ಠಾನಾಧಿಕಾರಿಗಳು ತಾಂತ್ರಿಕ ಅನುಮೋದನೆಯನ್ನು ನೀಡುವುದು.

**ಆಡಳಿತಾತ್ಮಕ ಅನುಮೋದನೆ:**

ಎಲ್ಲಾ ಕಾಮಗಾರಿಗಳ ಸಂಬಂಧ ತಾಂತ್ರಿಕ ಅನುಮೋದನೆ ನಂತರ ಆಡಳಿತಾತ್ಮಕ ಮಂಜೂರಾತಿಯನ್ನು ಈ ಕೆಳಕಂಡಂತೆ ನೀಡುವುದು:

ಗ್ರಾಮ ಪಂಚಾಯತಿ ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯತಿಗಳ ಆಯವ್ಯಯ ಮತ್ತು ಲೆಕ್ಕಪತ್ರಗಳು) ನಿಯಮಗಳು 2006 ರನ್ವಯ ಅಂದಾಜು ಮೊತ್ತ ರೂ.10.00 ಲಕ್ಷ (ರೂ. ಹತ್ತುಲಕ್ಷ) ರೂಪಾಯಿಗಳವರೆಗೆ ಗ್ರಾಮ ಪಂಚಾಯತಿ; ಮತ್ತು

ರೂ.10.00 ಲಕ್ಷ (ರೂ. ಹತ್ತುಲಕ್ಷ) ಕ್ಕೂ ಮೇಲ್ಪಟ್ಟು ಎಲ್ಲಾ ಅಂದಾಜು ಪಟ್ಟಿಗಳಿಗೆ ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿಗಳು ಅನುಮೋದನೆ ನೀಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ:ಪಿ.ಸಿ. ಜಾಫರ್**

ನಿರ್ದೇಶಕರು,

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1276

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ:** ಬೆಳಗಾವಿ ಜಿಲ್ಲೆಯ ಬೆಳಗಾವಿ ಮತ್ತು ಗೋಕಾಕ್ ತಾಲ್ಲೂಕುಗಳಲ್ಲಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪತ್ರಸಂಖ್ಯೆ: ಸಿಬಿಎನ್/ಹೈಆ್ಯಸೆ/ಕ.ಸಂ.7/5/ಆಸಮ/ಗ್ರಾರಮೇ/ಬೆಳಗಾವಿ ಜಿಲ್ಲೆ/08–09/12344, ದಿನಾಂಕ: 24.1.2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರು ಬೆಳಗಾವಿ ಜಿಲ್ಲೆಯ ಬೆಳಗಾವಿ ಮತ್ತು ಗೋಕಾಕ್ ತಾಲ್ಲೂಕುಗಳಲ್ಲಿನ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ. ಸಂ. | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ. ಗಳಲ್ಲಿ |
|---|---|---|
| | **ಬೆಳಗಾವಿ ತಾಲ್ಲೂಕು** | |
| 1. | ಕಾಕತಿ–ಸೋನಟ್ಟಿ ರಸ್ತೆ | 3.00 |
| 2. | ಕಟ್ಟಿನಭಾವಿಯಿಂದ ಬೋಡಕ್ಯಾನಟ್ಟಿ ರಸ್ತೆ | 1.50 |
| 3. | ಗುಗ್ಗರ್‍ಯಾನಟ್ಟಿಯಿಂದ ಎನ್.ಹೆಚ್–4ಕ್ಕೆ ಕೂಡುವ ರಸ್ತೆ | 5.00 |
| 4. | ಹಗ್ಗೇರಿ–ಹೊಸೂರದಿಂದ ಎನ್.ಹೆಚ್–4ಕ್ಕೆ ಕೂಡುವ ರಸ್ತೆ | 3.00 |
| 5. | ಭೂತರಾಮನಟ್ಟಿಯಿಂದ ಗೋಡಿಹಾಳ ರಸ್ತೆ | 7.00 |
| | **ಒಟ್ಟು** | **19.50** |
| | **ಗೋಕಾಕ ತಾಲ್ಲೂಕು** | |
| 6. | ಕೌಜಲಗಿ–ಕಳ್ಳಿಗುದ್ದಿ (ತಾಲ್ಲೂಕು ಗಡಿಯವರೆಗೆ) ರಸ್ತೆ | 5.50 |
| | **ಒಟ್ಟು** | **5.50** |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 153 ಸಿಆರ್‌ಎಂ 2008, ಬೆಂಗಳೂರು, ದಿನಾಂಕ: 4ನೇ ಮೇ 2009**

ಬೆಳಗಾವಿ ಜಿಲ್ಲೆಯ ಬೆಳಗಾವಿ ಮತ್ತು ಗೋಕಾಕ್ ತಾಲ್ಲೂಕುಗಳಲ್ಲಿನ ಒಟ್ಟು 25.00 ಕಿ.ಮೀ. ಉದ್ದದ ಈ ಕೆಳಕಂಡ 6 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ. ಸಂ. | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ. ಗಳಲ್ಲಿ |
|---|---|---|
| | **ಬೆಳಗಾವಿ ತಾಲ್ಲೂಕು** | |
| 1. | ಕಾಕತಿ–ಸೋನಟ್ಟಿ ರಸ್ತೆ | 3.00 |
| 2. | ಕಟ್ಟಿನಭಾವಿಯಿಂದ ಬೋಡಕ್ಯಾನಟ್ಟಿ ರಸ್ತೆ | 1.50 |
| 3. | ಗುಗ್ಗರ್‍ಯಾನಟ್ಟಿಯಿಂದ ಎನ್.ಹೆಚ್–4ಕ್ಕೆ ಕೂಡುವ ರಸ್ತೆ | 5.00 |
| 4. | ಹಗ್ಗೇರಿ–ಹೊಸೂರದಿಂದ ಎನ್.ಹೆಚ್–4ಕ್ಕೆ ಕೂಡುವ ರಸ್ತೆ | 3.00 |
| 5. | ಭೂತರಾಮನಟ್ಟಿಯಿಂದ ಗೋಡಿಹಾಳ ರಸ್ತೆ | 7.00 |
| | **ಒಟ್ಟು** | **19.50** |
| | **ಗೋಕಾಕ ತಾಲ್ಲೂಕು** | |
| 6. | ಕೌಜಲಗಿ–ಕಳ್ಳಿಗುದ್ದಿ (ತಾಲ್ಲೂಕು ಗಡಿಯವರೆಗೆ) ರಸ್ತೆ | 5.50 |
| | **ಒಟ್ಟು** | **5.50** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ರೇವಣ್ಣ**

ಪಿ.ಆರ್. 1277

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ).

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ದಿನಾಂಕ:18.05.2009 ರಿಂದ 21.5.2009 ರವರೆಗೆ ನಡೆಯುವ 2009 ಬಯೋ ಇಂಟರ್‌ನ್ಯಾಷನಲ್ ಕನ್ವೆಂಷನ್, ಅಟ್ಲಾಂಟ, ಯು.ಎಸ್.ಎ. ಮೇಳದಲ್ಲಿ ಭಾಗವಹಿಸುವ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರು, ಮಾಹಿತಿ ತಂತ್ರಜ್ಞಾನ, ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಹಾಗೂ ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಇವರ ಪತ್ರದ ಸಂಖ್ಯೆ.ಕೆಬಿಟ್ಸ್/ಈವೆಂಟ್ಸ್/ಎಫ್18/ಸಿಬಿಟ್ಸ್/2009/08–09, ದಿನಾಂಕ:4.3.2009.

2. ಶ್ರೀ ಅರವಿಂದ್ ರಾಮಚಂದ್ರ ಜನ್ನು, ಭಾ.ಆ.ಸೇ, ನಿರ್ದೇಶಕರು, ಮಾತಂ, ಜೈತಂ ನಿರ್ದೇಶನಾಲಯ, ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್, ಇವರ ಮನವಿ ದಿನಾಂಕ:12.5.2009.

3. ಶ್ರೀ ಬಿ.ಎಮ್. ವಿಜಯ ಶಂಕರ್, ಕೆ.ಎ.ಎಸ್, ಕಾರ್ಯಕಾರಿ ನಿರ್ದೇಶಕರು, ಕೆಬಿಟ್ಸ್, ಇವರ ಮನವಿ ದಿ:12.5.2009.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ, ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಹಾಗೂ ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಇವರ ದಿನಾಂಕ: 4.3.2009ರ ಪತ್ರದಲ್ಲಿ ದಿನಾಂಕ:18.5.2009 ರಿಂದ 21.5.2009 ರವರೆಗೆ Georgia World Congress Centre, Atlanta, U.S.A.ದಲ್ಲಿ ನಡೆಯಲಿರುವ 2009 ಬಯೋ ಇಂಟರ್ ನ್ಯಾಷನಲ್ ಕನ್ವೆಂಷನ್‌ನಲ್ಲಿ, ಬಂಡವಾಳ ಹೂಡಿಕೆದಾರರೊಂದಿಗೆ ಹಾಗೂ ಕಂಪನಿಗಳೊಂದಿಗೆ ಚರ್ಚಿಸಿ ಕರ್ನಾಟಕದಲ್ಲಿ ಬಂಡವಾಳ ಹೂಡಿಕೆಯನ್ನು ಮಾಡುವ ಸಲುವಾಗಿ ಆಹ್ವಾನಿಸುವುದಕ್ಕೆ ಸಹಾಯಕವಾಗಿರುತ್ತದೆಂದು ತಿಳಿಸುತ್ತಾ, ಮಾನ್ಯ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸಚಿವರ ನೇತೃತ್ವದಲ್ಲಿ ಈ ಕೆಳಕಂಡ ಇಲಾಖಾಧಿಕಾರಿಗಳನ್ನೊಳಗೊಂಡ ತಂಡವನ್ನು ನಿಯೋಜಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

1. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಾತಂ, ಜೈತಂ ಮತ್ತು ವಿತಂ ಇಲಾಖೆ ಹಾಗೂ ಅಧ್ಯಕ್ಷರು, ಕೆ–ಬಿಟ್ಸ್.
2. ನಿರ್ದೇಶಕರು, ಮಾತಂಜೈತಂ ಇಲಾಖೆ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕೆ–ಬಿಟ್ಸ್.
3. ವಿಶೇಷ ಕರ್ತವ್ಯಾಧಿಕಾರಿಗಳು, ಮಾತಂ, ಜೈತಂ ಮತ್ತು ವಿತಂ ಇಲಾಖೆ.
4. ಕಾರ್ಯಕಾರಿ ನಿರ್ದೇಶಕರು, ಕೆ–ಬಿಟ್ಸ್.

ಶ್ರೀ ಅರವಿಂದ್ ರಾಮಚಂದ್ರ ಜನ್ನು, ಭಾ.ಆ.ಸೇ. ನಿರ್ದೇಶಕರು, ಮಾತಂ, ಜೈತಂ ನಿರ್ದೇಶನಾಲಯ, ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್, ಶ್ರೀ ಬಿ.ಎಮ್. ವಿಜಯ ಶಂಕರ್, ಕೆ.ಎ.ಎಸ್, ಕಾರ್ಯಕಾರಿ ನಿರ್ದೇಶಕರು, ಕೆಬಿಟ್ಸ್, ರವರುಗಳು ಉಲ್ಲೇಖ (2) ಮತ್ತು (3) ರಲ್ಲಿನ ಮನವಿ ಪತ್ರದಲ್ಲಿ ದಿ.21.5.2009 ರಂದು ಪ್ರಸ್ತಾಪಿತ ಕನ್ವೆಂಷನ್ ಮುಗಿದ ನಂತರ ನ್ಯಾಯಾರ್ಕ್‌ನಲ್ಲಿರುವ ತಮ್ಮ ಸಂಬಂಧಿಕರನ್ನು ಭೇಟಿ ಮಾಡಲು ದಿ.22.5.2009 ಹಾಗೂ 23.5.2009 ರಂದು ಎರಡು ದಿನ ಸಾಂದರ್ಭಿಕ (ಎಕ್ಸ್–ಕಂಟ್ರಿ) ರಜೆಯನ್ನು ಹಾಗೂ ದಿ.24.5.2009 (ಭಾನುವಾರ) ರ ಸಾರ್ವಜನಿಕ ರಜೆಯನ್ನು ವಿನಿಯೋಗಿಸಿಕೊಂಡು ದಿ.25.5.2009 ರಂದು ಅಲ್ಲಿಂದ ಮರುಪ್ರಯಾಣ ಕೈಗೊಳ್ಳಲು ಅನುಮತಿಯನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ದಿನಾಂಕ:18.05.2009 ರಿಂದ 21.5.2009 ರವರೆಗೆ Georgia World Congress Centre, Atlanta, U.S.A ದಲ್ಲಿ ನಡೆಯಲಿರುವ 2009 ಬಯೋ ಇಂಟರ್ ನ್ಯಾಷನಲ್ ಕನ್ವೆಂಷನ್‌ನಲ್ಲಿ ಭಾಗವಹಿಸಲು ಶ್ರೀ ಅರವಿಂದ ರಾಮಚಂದ್ರ ಜನ್ನು, ಭಾ.ಆ.ಸೇ, ವ್ಯವಸ್ಥಾಪಕ ನಿರ್ದೇಶಕರು, ಕೆ–ಬಿಟ್ಸ್ ಹಾಗೂ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಮತ್ತು ಶ್ರೀ ಬಿ.ಎಮ್. ವಿಜಯಶಂಕರ್, ಕೆ.ಎ.ಎಸ್. ಕಾರ್ಯಕಾರಿ ನಿರ್ದೇಶಕರು, ಕೆ–ಬಿಟ್ಸ್ ಇವರುಗಳನ್ನು ನಿಯೋಜಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ:39:ಎಂಐಎಸ್:2009, ಬೆಂಗಳೂರು, ದಿನಾಂಕ: 16ನೇ ಮೇ 2009**

ಪ್ರಸ್ತಾವನೆಯಲ್ಲಿ ಹೇಳಿರುವ ಸಂದರ್ಭದಲ್ಲಿ, ದಿನಾಂಕ:18.05.2009 ರಿಂದ 21.5.2009 ರವರೆಗೆ Georgia World Congress Centre, Atlanta, U.S.A ದಲ್ಲಿ ನಡೆಯಲ್ಲಿರುವ 2009 ಬಯೋ ಇಂಟರ್ ನ್ಯಾಷನಲ್ ಕನ್ವೆಂಷನ್‌ನಲ್ಲಿ ನಲ್ಲಿ ಭಾಗವಹಿಸಲು **ಶ್ರೀ ಅರವಿಂದ ರಾಮಚಂದ್ರ ಜನ್ನು, ಭಾ.ಆ.ಸೇ., ವ್ಯವಸ್ಥಾಪಕ ನಿರ್ದೇಶಕರು, ಕೆ–ಬಿಟ್ಸ್ ಹಾಗೂ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಮತ್ತು ಶ್ರೀ ಬಿ.ಎಮ್. ವಿಜಯಶಂಕರ್, ಕೆ.ಎ.ಎಸ್., ಕಾರ್ಯಕಾರಿ ನಿರ್ದೇಶಕರು, ಕೆ–ಬಿಟ್ಸ್** ಇವರುಗಳನ್ನು ನಿಯೋಜಿಸಲು ಮಂಜೂರಾತಿ ನೀಡಿದೆ.

ಸದರಿ ಅಧಿಕಾರಿಗಳು ದಿನಾಂಕ:21.5.2009 ರಂದು ಪ್ರಸ್ತಾಪಿತ ಕನ್ವೆಂಷನ್ ಮುಗಿದ ನಂತರ ನ್ಯಾಯಾರ್ಕ್‌ನಲ್ಲಿರುವ ತಮ್ಮ ಸಂಬಂಧಿಕರನ್ನು ಭೇಟಿ ಮಾಡಲು ದಿನಾಂಕ:22.5.2009 ಹಾಗೂ 23.5.2009 ರಂದು ಎರಡು ದಿನ ಸಾಂದರ್ಭಿಕ (ಎಕ್ಸ್–ಕಂಟ್ರಿ) ರಜೆಯನ್ನು ಹಾಗೂ ದಿ:24.5.2009 (ಭಾನುವಾರ) ರ ಸಾರ್ವಜನಿಕ ರಜೆಯನ್ನು ವಿನಿಯೋಗಿಸಿಕೊಂಡು ದಿನಾಂಕ:25.5.2009 ರಂದು ಅಲ್ಲಿಂದ ಮರುಪ್ರಯಾಣ ಕೈಗೊಳ್ಳಲು ಅನುಮೋದನೆ ನೀಡಲಾಗಿದೆ.

ಅಧಿಕಾರಿಗಳ ಮೇಲ್ಕಂಡ ಅಧಿಕೃತ ವಿದೇಶ ಪ್ರವಾಸಕ್ಕೆ ತಗಲುವ ವೆಚ್ಚವನ್ನು ಮಾತ್ರ ಕೆ–ಬಿಟ್ಸ್ ಸಂಸ್ಥೆಯ ವತಿಯಿಂದ ಭರಿಸತಕ್ಕದ್ದು, ರಜೆ ಅವಧಿಯ ಪ್ರವಾಸಕ್ಕೆ ತಗಲುವ ವೆಚ್ಚವನ್ನು ತಮ್ಮ ಸ್ವಂತ ಹಣದಿಂದ ಭರಿಸತಕ್ಕದ್ದು.

ಅಧಿಕಾರಿಗಳು ವಿದೇಶ ಪ್ರವಾಸದಿಂದ ಹಿಂತಿರುಗಿ ಬಂದ 15 ದಿವಸಗಳೊಳಗಾಗಿ ಪ್ರವಾಸದ ವರದಿಯನ್ನು ಸರ್ಕಾರಕ್ಕೆ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ಇಲ್ಲದಿದ್ದಲ್ಲಿ, ಭವಿಷ್ಯದಲ್ಲಿ ವಿದೇಶ ನಿಯೋಜನೆಯನ್ನು ಅನುಮೋದಿಸಲಾಗುವುದಿಲ್ಲ. ವರದಿಯು 750 ಪದಗಳನ್ನು ಮೀರತಕ್ಕದಲ್ಲ ಮತ್ತು 'A-4 size' ಹಾಳೆಯಲ್ಲಿ ಮಂಡಿಸತಕ್ಕದ್ದು.

ಈ ಆದೇಶವನ್ನು ಸಿ.ಆ.ಸು.ಇ. (ಸೇವೆಗಳು–ಜಿ) ವಿಭಾಗದ ಟಿಪ್ಪಣಿ ಸಂಖ್ಯೆ ಸಿಆಸುಇ 48 ಎಸ್‌ಎಂಇ 2009, ದಿನಾಂಕ: 14.5.2009ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 1278 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಶ್ರೀ ಎಸ್. ಮಹಮದ್ ಇಕ್ಬಾಲ್, ಕೈಗಾರಿಕಾ ಉತ್ತೇಜನಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರನ್ನು ಅಮಾನತ್ತಿನಿಂದ ತೆರವುಗೊಳಿಸಿ ಸೇವೆಗೆ ಪುನರ್ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರದ ಸಂಖ್ಯೆ:ಲೋಕ್/ಐಎನ್‌ವಿ (ಜಿ)/ಸಿಟಿ/ಕ್ರೈಮ್ 46/2008/ ದಿನಾಂಕ: 26.08.2008.
2. ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯದ ಕಛೇರಿ ಆದೇಶ ಸಂಖ್ಯೆ:ಆಡಳಿತ/ಸಿಬ್ಬಂದಿ/ಇ3/34/ 2008–09 ದಿ: 19.09.2008.
3. ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯದ ಪತ್ರ ಸಂಖ್ಯೆ:ಆಡಳಿತ/ಸಿಬ್ಬಂದಿ/ಇ4/34/2008–09 ದಿ:24.04.2009.
4. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರದ ಸಂಖ್ಯೆ:ಲೋಕ್/ಐಎನ್‌ವಿ (ಜಿ)/ಸಿಟಿ/ಕ್ರೈಂ 46/2008/ ದಿನಾಂಕ: 29.04.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ರವರು ಆರೋಪಿತ ಸರ್ಕಾರಿ ಅಧಿಕಾರಿ, ಶ್ರೀ ಎಸ್. ಮಹಮದ್ ಇಕ್ಬಾಲ್, ಕೈಗಾರಿಕಾ ಉತ್ತೇಜನಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಪ್ರತಿ ನಿಯೋಜನೆ ಮೇರೆಗೆ ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸದರಿಯವರು ದಿ:25.08.2008ರಂದು ರೂ.25,000/–ಗಳ ಲಂಚವನ್ನು ಫಿರ್ಯಾದುದಾರರಿಂದ ಸ್ವೀಕರಿಸಿ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿ ಬಿದ್ದಿದ್ದರಿಂದ, ಉಲ್ಲೇಖ (2)ರ ಕಛೇರಿ ಆದೇಶದನ್ವಯ ಸದರಿ ಅಧಿಕಾರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳ 1957ರ ನಿಯಮ 10 ರನ್ವಯ ಅಮಾನತ್ತುಗೊಳಿಸಿ ಇವರ ಲೀನ್ (ಸ್ಥಾನ)ವನ್ನು ಕುಶಲಕರ್ಮಿ ತರಬೇತಿ ಸಂಸ್ಥೆ, ಹಾಸನ, ಇಲ್ಲಿಗೆ ವರ್ಗಾಯಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಮಖ್ಯೆ (3)ರ ಪತ್ರದಲ್ಲಿ ಶ್ರೀ ಎಸ್. ಮಹಮದ್ ಇಕ್ಬಾಲ್, ಕೈಗಾರಿಕಾ ಉತ್ತೇಜನಾಧಿಕಾರಿ (ಅಮಾನತ್ತು) ಇವರ ಅಮಾನತ್ತಿನ ಅವಧಿ 6 ತಿಂಗಳು ಮೀರಿದ್ದು ನಿಯಮಾನುಸಾರ ಅಮಾನತ್ತಿನ ಆದೇಶವನ್ನು ಹಿಂಪಡೆದು ಇವರ ಸೇವೆಯನ್ನು ಮರು ಸ್ಥಾಪಿಸಲು ಸದರಿಯವರು ಕೋರಿರುವ ಹಿನ್ನೆಲೆಯಲ್ಲಿ ನಿಯಮಗಳ ಅನ್ವಯ ಹಾಗೂ ಸರ್ಕಾರಿ ಓ.ಎಂ. ರೀತ್ಯಾ ಸರ್ಕಾರದ ಹಂತದಲ್ಲಿ ಕ್ರಮಕೈಗೊಳ್ಳಲು ಅಪರ ನಿರ್ದೇಶಕರು, (ಆಡಳಿತ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶ್ರೀ ಎಸ್. ಮಹಮದ್ ಇಕ್ಬಾಲ್, ಕೈಗಾರಿಕಾ ಉತ್ತೇಜನಾಧಿಕಾರಿ ರವರನ್ನು ಅಮಾನತ್ತಿನಿಂದ ಬಿಡುಗಡೆ ಮಾಡಿ ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ ತಮಗೆ ಸೂಕ್ತವೆನಿಸುವ ಕ್ರಮವನ್ನು ತೆಗೆದುಕೊಳ್ಳಬಹುದಾಗಿದೆ:ಸದರಿಯವರನ್ನು ಅಮಾನತ್ತಿನಿಂದ ತೆರವುಗೊಳಿಸಿದಲ್ಲಿ, ಕೃತ್ಯ ನಡೆದ ಸ್ಥಳದಿಂದ ಬೇರೆ ಕಡೆಗೆ ವರ್ಗಾಯಿಸುವಂತೆ ಕೈಗಾರಿಕಾಭಿವೃದ್ಧಿ ಆಯುಕ್ತರು, ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರಿಗೆ ತಿಳಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 78 ಕೈಸೇವಿ 2009, ಬೆಂಗಳೂರು, ದಿನಾಂಕ: 13ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10 (5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್. ಮಹಮದ್ ಇಕ್ಬಾಲ್, ಕೈಗಾರಿಕಾ ಉತ್ತೇಜನಾಧಿಕಾರಿ (ಅಮಾನತ್ತು) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆ ಶಿಸ್ತು ಕ್ರಮಗಳನ್ನು ಕಾಯ್ದಿರಿಸಿ, ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಿದೆ.

ಮುಂದುವರೆದು, ಶ್ರೀ ಎಸ್. ಮಹಮದ್ ಇಕ್ಬಾಲ್, ಕೈಗಾರಿಕಾ ಉತ್ತೇಜನಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರನ್ನು ಪ್ರತಿ ನಿಯೋಜನೆ ಮೇರೆಗೆ ವಿಶ್ವೇಶ್ವರಯ್ಯ ಕೈಗಾರಿಕಾ ವ್ಯಾಪಾರ ಕೇಂದ್ರ, ಬೆಂಗಳೂರು, ಇಲ್ಲಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಸಿ. ಪ್ರಕಾಶ್**

ಪಿ.ಆರ್. 1279

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು).

**ವಿಷಯ:** ಗದಗ, ಹಾವೇರಿ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಮರಳು ಸಾಗಾಣಿಕೆಗಾಗಿ ತಾತ್ಕಾಲಿಕ ಪರವಾನಿಗೆ ಜಾರಿ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಐ.142.ಎಂಎಂಎನ್.2008 ದಿನಾಂಕ:22.10.2008.

2. ದಿನಾಂಕ:08.05.2009ರ ಪತ್ರ ಸಂಖ್ಯೆ:ಡಿಎಂಜಿ:ಉನಿ(ಖಾ)/ಮರಳು:2009/349.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:22.10.2008ರ ಆದೇಶದಲ್ಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಮರಳು ಗಣಿಗಾರಿಕೆ/ಸಾಗಾಣಿಕೆಗಾಗಿ ನೂತನವಾಗಿ ನಿಯಮಾವಳಿಗಳನ್ನು ರೂಪಿಸಲು ಬೇಕಾಗುವ ಸಮಯ ಅಥವಾ ಆದೇಶದ ದಿನಾಂಕದಿಂದ 6 ತಿಂಗಳ ಅವಧಿ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗದಗ, ಹಾವೇರಿ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಮರಳು ಸಾಗಾಣಿಕೆಗಾಗಿ ತಾತ್ಕಾಲಿಕ ಪರವಾನಿಗೆ ಪದ್ಧತಿಯನ್ನು ಸದರಿ ಆದೇಶದಲ್ಲಿ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಜಾರಿಗೊಳಿಸಲು ಸರ್ಕಾರವು ಆದೇಶಿಸಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ:08.05.2009ರ ಪತ್ರದಲ್ಲಿ, ಮರಳು ಗಣಿಗಾರಿಕೆ ಮತ್ತು ಸಾಗಾಣಿಕೆ ಬಗ್ಗೆ ನೆರೆರಾಜ್ಯಗಳಾದ ತಮಿಳುನಾಡು ಹಾಗೂ ಆಂಧ್ರಪ್ರದೇಶದಲ್ಲಿ ಚಾಲ್ತಿಯಲ್ಲಿರುವ ಮರಳು ಗಣಿಗಾರಿಕೆ ಕುರಿತಾದ ನಿಯಮಾವಳಿಗಳನ್ನು ಪರಿಶೀಲಿಸಿ ರಾಜ್ಯದಲ್ಲಿನ ನಿಯಮಾವಳಿಗಳನ್ನು ಸರಳೀಕರಿಸುವ ಉದ್ದೇಶದಿಂದ ಹಾಗೂ ಪಿಲ್ಲರ್ ಮರಳಿನ ಗಣಿಗಾರಿಕೆ ಮತ್ತು ಅಕ್ರಮ ಮರಳು ಸಾಗಾಣಿಕೆಯನ್ನು ನಿಯಂತ್ರಿಸುವ ದಿಸೆಯಲ್ಲಿ, ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುತ್ತಾ, ಮರಳು ಸಾಗಾಣಿಕೆಗಾಗಿ ತಾತ್ಕಾಲಿಕ ಪರವಾನಿಗೆ ವ್ಯವಸ್ಥೆಯನ್ನು ಸರ್ಕಾರಿ ಆದೇಶ ಸಂಖ್ಯೆ:ಸಿಐ.142.ಎಂಎಂಎನ್.2008 ದಿನಾಂಕ:22.10.2008 ರಲ್ಲಿ 6 ತಿಂಗಳ ಅವಧಿಗೆ ಜಾರಿಮಾಡಿದ್ದು, ಸದರಿ ಅವಧಿಯು ದಿನಾಂಕ:21.4.2009ರಂದು ಮುಕ್ತಾಯಗೊಳ್ಳಲಿರುವ ಪ್ರಯುಕ್ತ ನಿಯಮಾವಳಿಗಳನ್ನು ರೂಪಿಸಲು ಬೇಕಾಗುವ ಸಮಯ ಅಥವಾ 6 ತಿಂಗಳವರೆಗೆ ಅವಧಿಯನ್ನು ವಿಸ್ತರಿಸಲು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಕೋರಿದ್ದು, ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ.142.ಎಂಎಂಎನ್.2008, ದಿನಾಂಕ: 14ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಮರಳು ಗಣಿಗಾರಿಕೆ/ಸಾಗಾಣಿಕೆಗಾಗಿ ನೂತನವಾಗಿ ನಿಯಮಾವಳಿಗಳನ್ನು ರೂಪಿಸಲು ಬೇಕಾಗುವ ಸಮಯ ಅಥವಾ ದಿನಾಂಕ:22.10.2008 ರಿಂದ 6 ತಿಂಗಳ ಅವಧಿ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗದಗ, ಹಾವೇರಿ ಮತ್ತು ಧಾರವಾಡ ಜಿಲ್ಲೆಗಳಿಗೆ ಒಳಪಟ್ಟಂತೆ ಮರಳು ಸಾಗಾಣಿಕೆಗಾಗಿ ತಾತ್ಕಾಲಿಕ ಪರವಾನಿಗೆಗಳ ಪದ್ಧತಿಯನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ:22.10.2008ರ ಆದೇಶದಲ್ಲಿನ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1280

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು).

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಬಿ.ಬೋರಯ್ಯ, ಸೇವಾನಿರತ ಪಿಎಸ್‌ಐ, ತಳಕು ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ (ಹಾಲಿ ಮೊಳಕಾಲ್ಮೂರು ಪೊ.ಠಾಣೆ) ರವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:46/ಸಿಬ್ಬಂದಿ–1/2007–08 ದಿನಾಂಕ:03.12.2007.

2. ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:52/ಸಿಬ್ಬಂದಿ–1/2007–08 ದಿನಾಂಕ:28.02.2009.

**ಪ್ರಸ್ತಾವನೆ:**

ಶ್ರೀ ಬಿ.ಬೋರಯ್ಯ, ಸೇವಾನಿರತ ಪಿಎಸ್‌ಐ, ಇವರು ದಿನಾಂಕ: 05.12.2003ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡು ಇವರ ವಿರುದ್ಧ ಚಾಲ್ತಿ ಶಿಕ್ಷೆಗಳು ಇರುವುದರಿಂದ ಐಜಿಪಿ ಪೂರ್ವವಲಯ, ದಾವಣಗೆರೆ ರವರು ಖಾಯಂ ಪೂರ್ವ ಅವಧಿಯನ್ನು ದಿನಾಂಕ: 15.09.2007 ರವರೆಗೆ ವಿಸ್ತರಿಸಿರುತ್ತಾರೆ. ಕರ್ನಾಟಕ ಸಿವಿಲ್ ಸೇವೆಗಳು (ಪರಿವೀಕ್ಷಣಾ) ನಿಯಮ, 1977ರ ನಿಯಮ 4 ಮತ್ತು 5(1) ರನ್ವಯ ಇವರು ಹೊಂದಿರುವ ಹುದ್ದೆಯ ಕಾರ್ಯಭಾರ ನಿರ್ವಹಿಸಲು ಸಮರ್ಥರೆಂದು ಸದರಿಯವರ ಖಾಯಂ ಪೂರ್ವ ಅವಧಿಯನ್ನು ಅವರಿಗೆ ವಿಧಿಸಲಾಗಿರುವ ಶಿಕ್ಷೆಗಳು ಮುಗಿಯುವವರೆಗೆ ಅಂದರೆ ದಿನಾಂಕ: 31.05.2009 ರವರೆಗೆ ಕೆ.ಸಿ.ಎಸ್. (ಪರಿವೀಕ್ಷಣಾ) ನಿಯಮ, 1977ರ ನಿಯಮ 4(i) ರ ಮೇರೆಗೆ ವಿಸ್ತರಿಸುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 326 ಪೊಸಇ 2007, ಬೆಂಗಳೂರು, ದಿನಾಂಕ: 15ನೇ ಮೇ 2009**

ಶ್ರೀ ಬಿ.ಬೋರಯ್ಯ, ಸೇವಾನಿರತ ಪಿಎಸ್‌ಐ, ತಳಕು ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 16.09.2007 ರಿಂದ 31.05.2009 ರವರೆಗೆ (ಚಾಲ್ತಿ ಶಿಕ್ಷೆ ಮುಗಿಯುವವರೆಗೆ) ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ 4(1)ನೇ ನಿಯಮದ ಉಪ ನಿಯಮ (i) ರನ್ವಯ ವಿಸ್ತರಿಸಲಾಗಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗದಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1281

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

**ವಿಷಯ:** ಬಿಜಾಪುರ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಎಸ್.ಸಿ.ಸಂ:2/98ರಲ್ಲಿ ಶ್ರೀ ಎಸ್.ಎಸ್. ಕೋಟಿ, ವಕೀಲರು ಇವರಿಗೆ ಸಂಭಾವನೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಲಾ 413 ಎಲ್‌ಸಿಬಿ 2000 ದಿನಾಂಕ: 8.3.2000.

2. ಸರ್ಕಾರದ ಆದೇಶ ಸಂ: ಲಾ 413 ಎಲ್‌ಸಿಬಿ 2000 ದಿನಾಂಕ: 16.9.2000.

3. ಸರ್ಕಾರದ ಆದೇಶ ಸಂ: ಲಾ 413 ಎಲ್‌ಸಿಬಿ 2000 ದಿನಾಂಕ: 19.7.2002.

4. ಶ್ರೀ ಎಸ್.ಎಸ್. ಕೋಟಿ, ವಕೀಲರು ಮತ್ತು ವಿಶೇಷ ಸರ್ಕಾರಿ ಅಭಿಯೋಜಕರು ಇವರ ಪತ್ರ ದಿನಾಂಕ: 29.01.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ: 8.3.2000ರಲ್ಲಿ ಶ್ರೀ ಎಸ್.ಎಸ್. ಕೋಟಿ, ವಕೀಲರು ಇವರನ್ನು ಬಿಜಾಪುರ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಎಸ್.ಸಿ. ಸಂ:2/98ರಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 18.8.2006ರಲ್ಲಿ ಅವರಿಗೆ ಈ ಕೆಳಗಿನಂತೆ ಸಂಭಾವನೆಯನ್ನು ನಿಗಧಿಗೊಳಿಸಲಾಗಿತ್ತು.

| | |
|---|---|
| ರೀಡಿಂಗ್ ಫೀ | ರೂ.40,000/– |
| ಪರಿಣಾಮಕಾರಿ ವಿಚಾರಣೆ | ರೂ.2,500/– |
| ಪರಿಣಾಮಕಾರಿಯಲ್ಲದ ವಿಚಾರಣೆ | ರೂ.1,000/– |
| ಗುಮಾಸ್ತಿಕೆಗೆ | ರೂ.1,000/– |
| ಪ್ರಯಾಣ ಮತ್ತು ದಿನಭತ್ಯೆ : ಅನುಮತಿಸಿದ ದರದಲ್ಲಿ | |

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 19.07.2002ರಲ್ಲಿ ಶ್ರೀ ಎಸ್.ಎಸ್. ಕೋಟಿ ಇವರಿಗೆ ಅವರ ಕೋರಿಕೆಯಂತೆ ಮಧ್ಯಂತರ ಸಂಭಾವನೆಯನ್ನು ಪಾವತಿಸಲಾಗಿತ್ತು.

ಈಗ ಮೇಲೆ (4)ರಲ್ಲಿ ಓದಲಾದ ಪತ್ರ ದಿನಾಂಕ: 29.01.2009ರಲ್ಲಿ ಶ್ರೀ ಎಸ್.ಎಸ್. ಕೋಟಿ ಇವರು ಅಂತಿಮ ಬಿಲ್ಲುಗಳನ್ನು ಪಾವತಿ ಕೋರಿ ಮನವಿ ಸಲ್ಲಿಸಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿತ್ತು.

**ಸರ್ಕಾರದ ಆದೇಶ ಸಂಖ್ಯೆ: ಒಇ 90 ಪಿಪಿಇ 2009, ದಿನಾಂಕ: 20ನೇ ಮೇ 2009**

ಬಿಜಾಪುರ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಎಸ್.ಸಿ. ಸಂ:2/98ರಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಕಗೊಂಡಿದ್ದ ಶ್ರೀ ಎಸ್.ಎಸ್. ಕೋಟಿ, ವಕೀಲರು ಇವರಿಗೆ ಅಂತಿಮ ಬಿಲ್ಲಿನ ಸಂಭಾವನೆಯನ್ನು ಈ ಕೆಳಗಿನಂತೆ ಪಾವತಿಸಲು ಮಂಜೂರಾತಿ ನೀಡಲಾಗಿದೆ.

| ಪರಿಣಾಮಕಾರಿ ವಿಚಾರಣೆ | ಪರಿಣಾಮಕಾರಿಯಲ್ಲದ ವಿಚಾರಣೆ |
|---|---|
| 64x2,500=1,60,000/– | 39x1,000=39,000/– |
| ಒಟ್ಟು : ರೂ.1,99,000/– (ಒಂದು ಲಕ್ಷದ ತೊಂಬತ್ತೊಂಬತ್ತು ಸಾವಿರ ರೂಪಾಯಿ ಮಾತ್ರ) | |

ಇದಕ್ಕೆ ತಗಲುವ ವೆಚ್ಚವನ್ನು "ಲೆಕ್ಕಶೀರ್ಷಿಕೆ 2014–ನ್ಯಾಯಾಡಳಿತ–114–ಲೀಗಲ್ ಅಡ್ವೈಸರ್ ಅಂಡ್ ಕೌನ್ಸಿಲ್–01–ಅಡ್ವೋಕೇಟ್ ಜನರಲ್ Payment for professional and special services in the budget" ರಡಿಯಲ್ಲಿ ಭರಿಸತಕ್ಕದ್ದು.

ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1333 ವೆಚ್ಚ–7/2000 ದಿನಾಂಕ:8.95.2000ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 1282

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,
(ಕಾ. ಮತ್ತು ಸು., ಕಾಫಿಪೋಸ ಮತ್ತು ಅಭಿಯೋಗಗಳು).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ನಗರ ಯೋಜನಾ ಇಲಾಖೆಯ ನಗರ ಯೋಜನಾ ನಿರ್ದೇಶಕರ ಹುದ್ದೆಯ ಪದನಾಮವನ್ನು ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು ಎಂದು ಬದಲಾಯಿಸುವ ಕುರಿತು.

**ಓದಲಾಗಿದೆ:** ನಗರ ಯೋಜನಾ ನಿರ್ದೇಶಕರು, ಬೆಂಗಳೂರು ಇವರ ಏಕ ಕಡತ ಸಂಖ್ಯೆ: ನಯೋ:ಸಿ(1):ನಿವ್ಯಬ:2008 ದಿನಾಂಕ: 02.08.2008.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದಲ್ಲಿರುವ ನಗರ / ಪಟ್ಟಣಗಳ ಯೋಜಿತ ಬೆಳವಣಿಗೆಗಾಗಿ ಅಭಿವೃದ್ಧಿ ಯೋಜನೆಗಳನ್ನು ರೂಪಿಸಲು ಹಾಗೂ ಸರ್ಕಾರದ ನೀತಿಗನುಗುಣವಾಗಿ ನಗರದ ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಕ್ಕೆ ತರಲು ಅಗತ್ಯ ಯೋಜನೆಗಳನ್ನು ರೂಪಿಸಲು ಪ್ರತ್ಯೇಕ ಇಲಾಖೆಯನ್ನು ಸ್ಥಾಪಿಸುವ ಅವಶ್ಯಕತೆಯನ್ನು ಮನಗಂಡು ಸರ್ಕಾರವು ದಿನಾಂಕ: 03.11.1959ರಂದು ಜಾರಿಗೆ ಬರುವಂತೆ ನಗರ ಯೋಜನಾ ಇಲಾಖೆಯನ್ನು ಸ್ಥಾಪಿಸಿತು. ರಾಜ್ಯದ ಎಲ್ಲಾ ನಗರ:ಪಟ್ಟಣಗಳ ಜೊತೆಗೆ ಗ್ರಾಮಗಳ ಯೋಜಿತ ಬೆಳವಣಿಗೆಗಾಗಿ ಮಹಾ ಯೋಜನೆಗಳನ್ನು ಸಿದ್ಧಪಡಿಸಿ, ಈ ಯೋಜನೆಗಳನ್ನು ಜಾರಿಗೊಳಿಸುವುದು ಈ ಇಲಾಖೆಯ ಪ್ರಮುಖ ಕಾರ್ಯವಾಗಿರುತ್ತದೆ.

ನಗರ ಯೋಜನಾ ಇಲಾಖೆಯ ಪ್ರಮುಖ ಕಾರ್ಯಚಟುವಟಿಕೆಗಳು ಈ ಕೆಳಕಂಡಂತೆ ಇರುತ್ತವೆ:

a) ನಗರ:ಪಟ್ಟಣ ಮತ್ತು ಅಭಿವೃದ್ಧಿ ಪಥದಲ್ಲಿರುವ ಗ್ರಾಮಗಳ ಭೌತಿಕ, ಸಾಮಾಜಿಕ ಹಾಗೂ ಆರ್ಥಿಕ ಸಮೀಕ್ಷೆ ಮಾಡಿ ಮಹಾಯೋಜನೆ (ಮಾಸ್ಟರ್ ಪ್ಲಾನ್) ಗಳನ್ನು ಸಿದ್ಧಪಡಿಸುವುದು, ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮದಡಿ ಈ ಯೋಜನೆಗಳನ್ನು ಸರ್ಕಾರಕ್ಕೆ ಸಲ್ಲಿಸಿ, ಅಂಗೀಕಾರ ಪಡೆಯುವುದು, ಪಟ್ಟಣ ಮತ್ತು ಗ್ರಾಮವಿಸ್ತರಣಾ (ಬಡಾವಣೆ) ಯೋಜನೆ:ಅಭಿವೃದ್ಧಿ ಸುಧಾರಣಾ ಯೋಜನೆಗಳು, ಪುನರ್ವಸತಿ ಯೋಜನೆಗಳು, ಮತ್ತಿತರ ಯೋಜನೆಗಳನ್ನು ತಯಾರಿಸುವುದು.

b) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ನಿಯಮಗಳನ್ನು ಅನುಷ್ಠಾನಕ್ಕೆ ತರುವ ವಿಷಯದಲ್ಲಿ ಕರ್ನಾಟಕ ನಗರ ಯೋಜನಾ ಮಂಡಳಿಗೆ ಹಾಗೂ ಯೋಜನೆಗಳನ್ನು ರೂಪಿಸಲು ಮತ್ತು ಕಾರ್ಯಗತಗೊಳಿಸಲು ನಗರಾಭಿವೃದ್ಧಿ ಪ್ರಾಧಿಕಾರಗಳಿಗೆ ಮತ್ತು ನಗರ ಯೋಜನಾ ಪ್ರಾಧಿಕಾರಗಳಿಗೆ ಸಂಬಂಧಿಸಿದಂತೆ ತಾಂತ್ರಿಕ ನೆರವು ನೀಡುವುದು.

c) ಸರ್ಕಾರಿ ಇಲಾಖೆಗಳು, ಅರೆಸರ್ಕಾರಿ ಸಂಸ್ಥೆಗಳು, ಸ್ಥಳೀಯ ಸಂಸ್ಥೆಗಳು ಹಾಗೂ ಖಾಸಗಿ ಸಂಸ್ಥೆಗಳ ಕೋರಿಕೆ ಮೇರೆಗೆ ವಿನ್ಯಾಸ ರೂಪಿಸಿ, ತಾಂತ್ರಿಕ ಅನುಮೋದನೆ ನೀಡುವುದು ಹಾಗೂ ಗ್ರಾಮಾಂತರ ಪ್ರದೇಶಗಳನ್ನು ಒಳಗೊಂಡಂತೆ ವ್ಯವಸಾಯ ಭೂಮಿಯನ್ನು ವ್ಯವಸಾಯೇತರ ಉದ್ದೇಶಗಳಿಗಾಗಿ ಪರಿವರ್ತಿಸಲು ಕಂದಾಯ

ಇಲಾಖೆಗೆ ತಾಂತ್ರಿಕ ಅಭಿಪ್ರಾಯ/ ನೆರವು ನೀಡುವುದು ಮತ್ತು ಜಿಲ್ಲಾ ದಂಡಾಧಿಕಾರಿಗಳಿಗೆ ಖಾಯಂ/ ಅರೆಖಾಯಂ ಚಿತ್ರಮಂದಿರಗಳಿಗೆ ಪರವಾನಗಿ ನೀಡುವ ಸಂಬಂಧ ತಾಂತ್ರಿಕ ಅಭಿಪ್ರಾಯ ನೀಡುವುದು.

ನಗರ ಯೋಜನಾ ಇಲಾಖೆಯ ನಗರ ಯೋಜನಾ ನಿರ್ದೇಶಕರ ಹುದ್ದೆಯ ಪದನಾಮವನ್ನು ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು ಎಂದು ಪುನರ್ ನಾಮಕರಣ ಮಾಡಲು ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರು ಸಲ್ಲಿಸಿರುವ ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ವಿವರಿಸಿರುತ್ತಾರೆ. ಸರ್ಕಾರವು ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 115 ನಯೋಸೇ 2008, ಬೆಂಗಳೂರು, ದಿನಾಂಕ: 15ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ನಗರ ಯೋಜನಾ ಇಲಾಖೆಯ "ನಗರ ಯೋಜನಾ ನಿರ್ದೇಶಕರ" ಹುದ್ದೆಯ ಪದನಾಮವನ್ನು "ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು" ಎಂದು ಪುನರ್ ನಾಮಕರಣಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 1283 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ವಿಸರ್ಜಿತ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಪ್ರಧಾನ ಸಂಪಾದಕರಾಗಿ ನಿವೃತ್ತರಾಗಿರುವ ಶ್ರೀ ಆರ್. ಬೋರಯ್ಯ ನವರಿಗೆ ವಿಳಂಬವಾಗಿ ಪಾವತಿಸಲಾದ ನಿವೃತ್ತಿ ಸೌಲಭ್ಯಗಳ ಮೇಲೆ ಬಡ್ಡಿ ಪಾವತಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ:07.10.2008ರ ಲೋಕ ಶಿಕ್ಷಣ ಇಲಾಖೆಯ ನಿರ್ದೇಶಕರ ಪತ್ರ ಸಂ:ಸಿ10/ಡಿಎಂಇ/ಕೆ.ಎ.ಟಿ. 4277/2004.
2. ಸರ್ಕಾರಿ ವಕೀಲರ ಪತ್ರ ದಿ:03.12.2008.
3. ಮಾನ್ಯ ಉಚ್ಚ ನ್ಯಾಯಾಲಯದ ಸರ್ಕಾರಿ ವಕೀಲರ ಪತ್ರ ದಿನಾಂಕ:06.03.2009.
4. ಸರ್ಕಾರದ ಪತ್ರ ದಿನಾಂಕ:11.03.2009.
5. ದಿನಾಂಕ:06.04.2009ರ ಲೋಕ ಶಿಕ್ಷಣ ಇಲಾಖೆಯ ನಿರ್ದೇಶಕರ ಪತ್ರ ಸಂ:ಸಿ10/ಡಿಎಂಇ/ಕೆ.ಎ.ಟಿ. 4277/2004.
6. ಶ್ರೀ ಆರ್. ಬೋರಯ್ಯ ಇವರು ಮಾನ್ಯ ಕೆ.ಎ.ಟಿ.ಯಲ್ಲಿ ದಾಖಲಿಸಿರುವ ನ್ಯಾಯಾಲಯ ನಿಂದನಾ ಅರ್ಜಿ ಸಂ:204/2008.

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ಪತ್ರದಂತೆ ವಿಸರ್ಜಿತ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಪ್ರಧಾನ ಸಂಪಾದಕರಾಗಿ ನಿವೃತ್ತರಾಗಿರುವ ಶ್ರೀ ಆರ್.ಬೋರಯ್ಯನವರು ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆಗೊಳಿಸುವಂತೆ ಕೋರಿ ಮಾನ್ಯ ಕೆ.ಎ.ಟಿ.ಯಲ್ಲಿ ಅರ್ಜಿ ಸಂ:4277/2004ರಲ್ಲಿ ಅರ್ಜಿ ದಾಖಲಿಸಿ, ಸದರಿ ಅರ್ಜಿಯಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ದಿನಾಂಕ:21.08.2008ರ ತನ್ನ ಆದೇಶದಲ್ಲಿ ಈ ಕೆಳಗಿನಂತೆ ಆದೇಶಿಸಿದೆ.

"For the above said reasons, the application is allowed and quashing order no. ಡಿಎಂಎ:ಸಿ6:ಪೆನ್:ಸಿಆರ್-11/2002-03 dated 22.06.2004 (Annexure `A7') it is held that the respondents cannot withhold the pensionary benefits of the applicant. They are directed to settle the pensionary benefits of the applicant within three months from this date. The applicant is also entitled to interest, as per rules, on the belated payment."

2. ಮಾನ್ಯ ಕೆ.ಎ.ಟಿ.ಯ ಈ ಮೇಲಿನ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾದ ಸರ್ಕಾರಿ ವಕೀಲರ ಪತ್ರದಲ್ಲಿ ಸರ್ಕಾರಿ ವಕೀಲರು ಅಭಿಪ್ರಾಯ ನೀಡಿದ ಹಿನ್ನೆಲೆಯಲ್ಲಿ ಮಾನ್ಯ ಉಚ್ಚನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಲಾಗಿತ್ತು. ಮಾನ್ಯ ಉಚ್ಚನ್ಯಾಯಾಲಯದ ಸರ್ಕಾರಿ ವಕೀಲರು ದಿನಾಂಕ:06.03.2009ರ ಪತ್ರದಲ್ಲಿ ಪ್ರಸ್ತುತ ಪ್ರಕರಣವು ಮೇಲ್ಮನವಿ ಸಲ್ಲಿಸಲು ಅರ್ಹ ಪ್ರಕರಣವಲ್ಲವಾದುದರಿಂದ ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ಹಾಗೂ 215 ರಡಿ ಪರಿಶೀಲಿಸಿ ಸೂಕ್ತ ನಿರ್ಧಾರ ಕೈಗೊಳ್ಳುವಂತೆ ಮೇಲೆ–(3)ರಲ್ಲಿ ಓದಲಾದ

ಪತ್ರದಲ್ಲಿ ಸೂಚಿಸಿದ್ದರು. ಈ ಮಧ್ಯೆ ನಿವೃತ್ತ ಅಧಿಕಾರಿಯಾದ ಶ್ರೀ ಬೋರಯ್ಯನವರು ಮಾನ್ಯ ಕೆ.ಎ.ಟಿ.ಯಲ್ಲಿ ಮೇಲೆ (6)ರಲ್ಲಿ ಓದಲಾದ ಅರ್ಜಿಯಲ್ಲಿ ನಿಂದನಾ ಅರ್ಜಿಯನ್ನು ದಾಖಲಿಸಿದರು.

3. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಆರ್. ಬೋರಯ್ಯ ಇವರಿಗೆ ತಡೆಹಿಡಿಯಲಾದ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆಗೊಳಿಸಲು ಸೂಚಿಸಲಾಗಿತ್ತು. ಅದರಂತೆ ಲೋಕ ಶಿಕ್ಷಣ ಇಲಾಖೆಯ ನಿರ್ದೇಶಕರು, ದಿನಾಂಕ:24.03.2009ರ ಪತ್ರದಲ್ಲಿ ಸದರಿ ನಿವೃತ್ತ ಸೌಲಭ್ಯಗಳನ್ನು ಬಿಡುಗಡೆಗೊಳಿಸಿ ಆದೇಶಿಸಿರುತ್ತಾರೆ. ಈ ರೀತಿ ಅನಗತ್ಯವಾಗಿ ವಿಳಂಬಮಾಡಿ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆಗೊಳಿಸಿರುವ ಅವಧಿಗೆ ಮಾನ್ಯ ಕೆ.ಎ.ಟಿ. ಆದೇಶದಂತೆ ಬಡ್ಡಿ ನೀಡುವ ನಿರ್ದೇಶನದ ಹಿನ್ನೆಲೆಯಲ್ಲಿ ಪ್ರಸ್ತಾವನೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 509 ಇಎಸ್ ಡಬ್ಲ್ಯು 2008, ಬೆಂಗಳೂರು, ದಿನಾಂಕ: 19ನೇ ಮೇ 2009**

4. ವಿಸರ್ಜಿತ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಪ್ರಧಾನ ಸಂಪಾದಕರಾಗಿ ಕಾರ್ಯನಿರ್ವಹಿಸಿ ನಿವೃತ್ತರಾಗಿರುವ ಶ್ರೀ ಆರ್. ಬೋರಯ್ಯನವರಿಗೆ ವಿಳಂಬವಾಗಿ ಪಾವತಿಸಲಾದ ನಿವೃತ್ತಿ ಸೌಲಭ್ಯಗಳ ಮೇಲೆ ಪಾವತಿ ಮಾಡಬೇಕಾಗಿರುವ ಬಡ್ಡಿ ರೂ.1,08,520/– (ರೂಪಾಯಿ ಒಂದು ಲಕ್ಷದ ಎಂಟು ಸಾವಿರದ ಐದು ನೂರು ಇಪ್ಪತ್ತು)ಗಳನ್ನು ಪಾವತಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

1. ವಿಸರ್ಜಿತ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಪ್ರಧಾನ ಸಂಪಾದಕರಾಗಿ ಕಾರ್ಯನಿರ್ವಹಿಸಿ ನಿವೃತ್ತರಾಗಿರುವ ಶ್ರೀ ಆರ್. ಬೋರಯ್ಯನವರು ಸರ್ಕಾರಕ್ಕೆ ಪಾವತಿ ಮಾಡಬೇಕಾಗಿರುವ ಹಾಗೂ ಆಡಿಟ್ ಆಕ್ಷೇಪಣೆಗೆ ಒಳಗಾಗಿರುವ ಮೊತ್ತ ರೂ.12,14,679/–ಗಳನ್ನು ವಸೂಲಿ ಮಾಡುವ ಬಗ್ಗೆ ಪ್ರತ್ಯೇಕ ಸಿವಿಲ್ ದಾವೆಯನ್ನು ಸೂಕ್ತ ನ್ಯಾಯಾಲಯದಲ್ಲಿ ದಾಖಲಿಸಲು ಸರ್ಕಾರದ ಮಂಜೂರಾತಿ ನೀಡಿದೆ. ಅದರಂತೆ ತಕ್ಷಣ ಕ್ರಮ ಕೈಗೊಳ್ಳತಕ್ಕದ್ದು.
2. ಶ್ರೀ ಆರ್. ಬೋರಯ್ಯನವರು ಸರ್ಕಾರಕ್ಕೆ ಪಾವತಿ ಮಾಡಬೇಕಾಗಿರುವ ಹಾಗೂ ಆಡಿಟ್ ಆಕ್ಷೇಪಣೆಗೆ ಒಳಗಾಗಿರುವ ಮೊತ್ತ ರೂ.12,14,679/–ಗಳನ್ನು ವಸೂಲಿ ಮಾಡುವ ಬಗ್ಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ಹಾಗೂ 215 ರಡಿ ಪುನರ್ ಪರಿಶೀಲಿಸಿ ಸೂಕ್ತ ತೀರ್ಮಾನ ಕೈಗೊಳ್ಳತಕ್ಕದ್ದು.
3. ಈ ರೀತಿ ತಪ್ಪು ತೀರ್ಮಾನಗಳನ್ನು ತೆಗೆದುಕೊಂಡು ಯಾವುದೇ ಇಲಾಖಾ ವಿಚಾರಣೆ ಮಾಡದೇ ಅನಗತ್ಯವಾಗಿ ತಡೆಹಿಡಿಯಲಾದ ಪಿಂಚಣಿ ಸೌಲಭ್ಯಗಳಿಗೆ ಬಡ್ಡಿ ಪಾವತಿಸಲು ಕಾರಣರಾದ ಹಾಗೂ ಸರ್ಕಾರಕ್ಕೆ ಹೆಚ್ಚಿನ ಆರ್ಥಿಕ ಹೊರೆ ಉಂಟುಮಾಡಲು ಕಾರಣರಾದ ಅಧಿಕಾರಿ/ನೌಕರರುಗಳನ್ನು ಗುರುತಿಸಿ ಅವರುಗಳಿಂದ ಸಮಾನವಾಗಿ ಒಂದು ತಿಂಗಳು ಒಳಗಾಗಿ ವಸೂಲಿ ಮಾಡಿ ಸರ್ಕಾರಕ್ಕೆ ಸಂಬಂಧಿಸಿದ ಲೆಕ್ಕ ಶೀರ್ಷಿಕೆಯಡಿ ಜಮಾ ಮಾಡತಕ್ಕದ್ದು.

5. ಈ ಆದೇಶವನ್ನು ಆರ್ಥಿಕ ಇಲಾಖೆಯ (ವಿಶ್ರಾಂತಿ ವೇತನ) ಟಿಪ್ಪಣಿ ಸಂಖ್ಯೆ: ಆಇ (ವಿ)88 ಪಿಇಎನ್–1/200 ದಿನಾಂಕ: 18.04.2009ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಸೋಮಶೇಖರ್**

ಪಿ.ಆರ್. 1284 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಆಕುಕ 658 ಪಿಐಎಂ 2007 , ಬೆಂಗಳೂರು, ದಿನಾಂಕ : 06–05–2009**

ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 658 ಪಿಐಎಂ 2007, ದಿನಾಂಕ:25–01–2008ರಲ್ಲಿನ 5ನೇ ಸಾಲಿನಲ್ಲಿ ನಮೂದಾದ "ಔಷಧ ಮತ್ತು ಕಾಂತಿವರ್ಧಕ ನಿಯಮಗಳ ನಿಯಮ 162 ರನ್ವಯ" ಎಂಬುದರ ಬದಲಾಗಿ "ಔಷಧ ಮತ್ತು ಕಾಂತಿವರ್ಧಕ ನಿಯಮಗಳು 1945ರ ನಿಯಮ 162– A" ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಮಹಾಲಕ್ಷ್ಮಮ್ಮ**

ಪಿ.ಆರ್. 1286 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

## ಕಂದಾಯ ಸಚಿವಾಲಯ

**ವಿಷಯ:** ದಿನಾಂಕ 08.05.2009 ರಂದು ನಡೆದ ಕಂದಾಯ ಇಲಾಖೆಯ ವೃಂದ ನಿರ್ವಹಣಾ ಪ್ರಾಧಿಕಾರ ಸಭೆಯ ನಡವಳಿಗಳು.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 457 ಎಎಸ್‌ಡಿ 2008, ದಿನಾಂಕ: 03.01.2009 ಹಾಗೂ ಕಂಇ 168 ಎಎಸ್‌ಡಿ 2009, ದಿನಾಂಕ : 15.04.2009

2) ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 16 ಎಟಿಎಸ್ 2009, ದಿನಾಂಕ: 20.02.2009

3) ಅರ್ಜಿ ಸಂಖ್ಯೆ 522/2009, 1834/2009, ದಿನಾಂಕ 24.04.2009 ಮತ್ತು 935/2009, ದಿನಾಂಕ:16.03.2009 ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಆದೇಶ.

**ಪ್ರಸ್ತಾವನೆ:**

ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 457 ಎಎಸ್‌ಡಿ 2008, ದಿನಾಂಕ: 03.01.2009 ರಂದು ಶ್ರೀಮತಿ ಆಶಾ ಪರ್ವೀನ್, ಇವರನ್ನು ದೇವನಹಳ್ಳಿ ತಾಲ್ಲೂಕು ತಹಶೀಲ್ದಾರ್ ಶ್ರೀ ಸಂಪತ್‌ಕುಮಾರ್ ಇವರ ಸ್ಥಳಕ್ಕೆ ವರ್ಗಾಯಿಸಿರುವುದನ್ನು ಪ್ರಶ್ನಿಸಿ ಶ್ರೀ ಸಂಪತ್‌ಕುಮಾರ್, ಇವರು ಕೆ.ಎ.ಟಿ.ಯಲ್ಲಿ ಅರ್ಜಿ ಸಂಖ್ಯೆ 522/2009ನ್ನು ದಾಖಲಿಸಿದ್ದರು. ಮುಖ್ಯ ಚುನಾವಣಾಧಿಕಾರಿಗಳು, ಬೆಂಗಳೂರು ಇವರು ಶ್ರೀಮತಿ.ಆಶಾ ಪರ್ವೀನ್, ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು, ಇವರ ಚುನಾವಣಾ ಕೆಲಸ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸುತ್ತಿಲ್ಲವಾದ್ದರಿಂದ ಅವರನ್ನು ಬೇರೆ ಕಡೆಗೆ ವರ್ಗಾಯಿಸಿ ಬೇರೊಬ್ಬರನ್ನು ನೇಮಕ ಮಾಡುವಂತೆ ನಿರ್ದೇಶನ ನೀಡಿದ ಹಿನ್ನೆಲೆಯಲ್ಲಿ ಶ್ರೀಮತಿ ಆಶಾ ಪರ್ವೀನ್ ಇವರನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 168 ಎಎಸ್‌ಡಿ 2009 ದಿನಾಂಕ: 15.04.2009ರಂದು ಕಛೇರಿ ಸಹಾಯಕರು, ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಚೇರಿ, ಬೆಂಗಳೂರು ಇಲ್ಲಿಗೆ ವರ್ಗಾಯಿಸಲಾಗಿತ್ತು. ಈ ಆದೇಶವನ್ನು ಪ್ರಶ್ನಿಸಿ ಶ್ರೀಮತಿ ಆಶಾ ಪರ್ವೀನ್ ಇವರು ಕೆ.ಎ.ಟಿಯಲ್ಲಿ ಅರ್ಜಿ ಸಂಖ್ಯೆ:1834/2009ನ್ನು ಸಲ್ಲಿಸಿದ್ದರು. ಕೆ.ಎ.ಟಿ.ಯು ಎರಡು ಅರ್ಜಿಗಳನ್ನು ಕ್ಲಬ್ ಮಾಡಿ ದಿನಾಂಕ:24.04.2009ರಂದು ವಿಲೇವಾರಿ ಮಾಡಿ ಈ ಇಬ್ಬರು ಅಧಿಕಾರಿಗಳ ಕೋರಿಕೆ ಬಗ್ಗೆ ದಿನಾಂಕ: 22.11.2001 ಮತ್ತು 07.07.2008ರ ವರ್ಗಾವಣೆ ಮಾರ್ಗಸೂಚಿಗಳನ್ವಯ ಪರಿಶೀಲಿಸಿ ಈ ಇಬ್ಬರೂ ಅಧಿಕಾರಿಗಳಿಗೆ ಅನ್ವಯಿಸುವಂತೆ appropriate common order ಹೊರಡಿಸುವಂತೆ ಆದೇಶಿಸಲಾಗಿದೆ.

ದಿನಾಂಕ: 08.05.2009 ರಂದು ನಡೆಸಿದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯಲ್ಲಿ ಕೆ.ಎ.ಟಿ.ಯು ನೀಡಿರುವ ದಿನಾಂಕ: 24.04.2009ರ ಆದೇಶವನ್ನು ಪರಿಶೀಲಿಸಲಾಯಿತು. ದಿನಾಂಕ: 08.05.2009ರವರೆಗೆ ಪರಿಶೀಲಿಸಲಾಗಿ ಈ ದಿವಸದವರೆಗೆ ಈ ಇಬ್ಬರೂ ಅಧಿಕಾರಿಗಳಿಂದ ವರ್ಗಾವಣೆ ಸಂಬಂಧ ಯಾವುದೇ ಮರು ಪರಿಶೀಲನಾ ಅರ್ಜಿಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ದೇವನಹಳ್ಳಿ ತಾಲ್ಲೂಕಿನ ದೊಡ್ಡತಟ್ಟಮಂಗಲ ವಿಜಯಪುರ ಹೋಬಳಿಯಲ್ಲಿ ಮಂಜೂರಾಗಿರುವ ಗೋಮಾಳ ಜಮೀನಿನ ತಿದ್ದುಪಡಿ ಆದೇಶ ಮಾಡಿರುವ ಬಗ್ಗೆ ಲೋಕಾಯುಕ್ತರು ತನಿಖೆ ನಡೆಸಿದ್ದು, ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಲೋಕಾಯುಕ್ತರಿಗೆ ವಹಿಸಿದೆ. ಶ್ರೀ ಸಂಪತ್‌ಕುಮಾರ್ ವಿರುದ್ಧ ದೂರುಗಳಿರುವುದರಿಂದ ಅವರನ್ನು ದೇವನಹಳ್ಳಿ ತಹಶೀಲ್ದಾರ್ ಹುದ್ದೆಯಲ್ಲಿ ಮುಂದುವರೆಸುವುದು ಸೂಕ್ತವಲ್ಲವೆಂದು ತೀರ್ಮಾನಿಸಿ ಅವರನ್ನು ಪ್ರಾದೇಶಿಕ ಆಯುಕ್ತರ ಕಚೇರಿ, ಗುಲಬರ್ಗ, ಇಲ್ಲಿ ಖಾಲಿಯಿರುವ ತಹಶೀಲ್ದಾರ್ ಹುದ್ದೆಗೆ ನೇಮಕ ಮಾಡುವಂತೆ ಹಾಗೂ ಶ್ರೀಮತಿ ಆಶಾ ಪರ್ವೀನ್ ಇವರನ್ನು ದೇವನಹಳ್ಳಿ ತಾಲ್ಲೂಕು ತಹಶೀಲ್ದಾರ್ ಹುದ್ದೆಯಲ್ಲಿ ಮುಂದುವರೆಸಲು ಮತ್ತು ಶ್ರೀ ಪಿ.ಎಸ್.ಶಿವಪುತ್ರಪ್ಪ ಇವರನ್ನು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಚೇರಿ ಸಹಾಯಕರ ಹುದ್ದೆಯಲ್ಲಿ ಮುಂದುವರೆಸಲು ತೀರ್ಮಾನಿಸಲಾಯಿತು.

ಶ್ರೀ ಜಿ. ಬಸವನಗೌಡ, ಹಿಂದಿನ ವಿಶೇಷ ತಹಶೀಲ್ದಾರ್, ನಿಡಗುಂದಿ, ಪ್ರಸ್ತುತ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಚೇರಿ, ಬಿಜಾಪುರ, ಇವರ ವರ್ಗಾವಣೆ ಸಂಬಂಧ ಕೆ.ಎ.ಟಿ. ಅರ್ಜಿ ಸಂಖ್ಯೆ: 935/2009ರಲ್ಲಿ ನೀಡಿದ ನಿರ್ದೇಶನವನ್ನು ಪರಿಶೀಲಿಸಲಾಯಿತು. 2009ರ ಲೋಕಸಭಾ ಚುನಾವಣೆ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಖಾಲಿ ಇರುವ ತಾಲ್ಲೂಕು ಮಟ್ಟದ ತಹಶೀಲ್ದಾರ್ ಹಾಗೂ ಚುನಾವಣಾ ತಹಶೀಲ್ದಾರ್ ಹುದ್ದೆಗಳನ್ನು ಭರ್ತಿ ಮಾಡುವಂತೆ ಭಾರತ ಚುನಾವಣಾ ಆಯೋಗ ನಿರ್ದೇಶನ ನೀಡಿದ ಹಿನ್ನೆಲೆಯಲ್ಲಿ ನಿಡಗುಂದಿ ವಿಶೇಷ ತಹಶೀಲ್ದಾರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಜಿ. ಬಸವನಗೌಡ ಇವರನ್ನು ಬಿಜಾಪುರ ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ಖಾಲಿ ಇದ್ದ ಚುನಾವಣಾ ತಹಶೀಲ್ದಾರ್ ಹುದ್ದೆಗೆ ನೇಮಕ ಮಾಡಿ, ಸದರಿ ಹುದ್ದೆ ಭರ್ತಿ ಮಾಡಿರುವುದರಿಂದ ಈ ವರ್ಗಾವಣೆಗೆ ದಿನಾಂಕ:22.11.2001ರ ವರ್ಗಾವಣೆ ಮಾರ್ಗಸೂಚಿಗಳು ಅನ್ವಯವಾಗುವುದಿಲ್ಲ. ಆದುದರಿಂದ, ಇವರನ್ನು ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಚೇರಿ, ಬಿಜಾಪುರ ಇಲ್ಲಿನ ಹುದ್ದೆಯಲ್ಲಿ ಮುಂದುವರೆಸಲು ತೀರ್ಮಾನಿಸಲಾಯಿತು. ಅದರಂತೆ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ : ಕಂಇ127 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 8ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

1. ಶ್ರೀಮತಿ ಆಶಾ ಪರ್ವೀನ್, ತಹಶೀಲ್ದಾರ್, ಇವರನ್ನು ದೇವನಹಳ್ಳಿ ತಾಲ್ಲೂಕು, ತಹಶೀಲ್ದಾರ್ ಹುದ್ದೆಯಲ್ಲಿ ಮುಂದುವರೆಸಿದೆ.
2. ಶ್ರೀ ಪಿ.ಎಸ್. ಶಿವಪುತ್ರಪ್ಪ, ತಹಶೀಲ್ದಾರ್, ಇವರನ್ನು ಕಛೇರಿ ಸಹಾಯಕರು, ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಹುದ್ದೆಯಲ್ಲಿ ಮುಂದುವರೆಸಿದೆ.
3. ಶ್ರೀ ಸಂಪತ್‌ಕುಮಾರ್, ತಹಶೀಲ್ದಾರ್, ಇವರನ್ನು ಪ್ರಾದೇಶಿಕ ಆಯುಕ್ತರ ಕಛೇರಿ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ, ಇಲ್ಲಿ ಖಾಲಿ ಇರುವ ತಹಶೀಲ್ದಾರ್ ಹುದ್ದೆಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.
4. ಶ್ರೀ ಜಿ. ಬಸವನಗೌಡ, ಹಿಂದಿನ ವಿಶೇಷ ತಹಶೀಲ್ದಾರ್, ನಿಡಗುಂದಿ, ಬಿಜಾಪುರ ಜಿಲ್ಲೆ, ಇವರನ್ನು ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಬಿಜಾಪುರ ಇಲ್ಲಿನ ಹುದ್ದೆಯಲ್ಲಿ ಮುಂದುವರೆಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಸರ್ಕಾರದ ಉಪ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು ಹಾಗೂ ವಿಪತ್ತು ನಿರ್ವಹಣೆ)

ಪಿ.ಆರ್. 1287

**ವಿಷಯ:** ಶ್ರೀ ಸಂಪತ್‌ಕುಮಾರ್, ಹಿಂದಿನ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು ಪ್ರಸ್ತುತ ನೇಮಕಾತಿ ನಿರೀಕ್ಷಣೆಯಲ್ಲಿರುವ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮಾನ್ಯ ಉಪಲೋಕಾಯುಕ್ತರಿಗೆ ವಹಿಸಿಕೊಡುವ ಬಗ್ಗೆ.

**ಓದಲಾಗಿದೆ:** ಉಪ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ಅ.ಸ.ಪತ್ರ ಸಂ: ಕಂಪ್ಲೇಂಟ್/ಉಪಲೋಕ್/ಬಿಡಿ–9\866/2007/ಡಿಆರ್‌ಇ–2, ದಿನಾಂಕ:18–04–2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದೊಂದಿಗೆ ಉಪ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರು ಶ್ರೀ ಸಂಪತ್‌ಕುಮಾರ್, ಇವರು ದೇವನಹಳ್ಳಿ ತಾಲ್ಲೂಕು ಕಛೇರಿಯಲ್ಲಿ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದ, ಇವರ ವಿರುದ್ಧ ಸ್ವೀಕೃತವಾದ ದೂರಿನ ಬಗ್ಗೆ ಪ್ರಾಥಮಿಕ ವಿಚಾರಣೆ ನಡೆಸಿ, ಮಾನ್ಯ ಉಪಲೋಕಾಯುಕ್ತರು ನೀಡಿರುವ ವರದಿಯನ್ನು ಕಳುಹಿಸಿ, ವರದಿಯ ಬಗ್ಗೆ ಕ್ರಮ ಕೈಗೊಂಡು ಕ್ರಮದ ಬಗ್ಗೆ ತಿಳಿಸಲು ಕೋರಿರುವರು.

ಸದರಿ ವರದಿಯನ್ನು ಪರಿಶೀಲಿಸಲಾಗಿ ದೇವನಹಳ್ಳಿ ತಾಲ್ಲೂಕು, ವಿಜಯಪುರ ಹೋಬಳಿ, ದೊಡ್ಡತತ್ತ ಮಂಗಲ, ಸರ್ವೇ ನಂ: 157/ಪಿ–24 ರಲ್ಲಿ 2–00 ಎಕರೆ ಜಮೀನನ್ನು ಶ್ರೀ ಚನ್ನರಾಯಪ್ಪ ಮುನಿಶಾಮಪ್ಪ ಎಂಬುವವರಿಗೆ ಸರ್ಕಾರದಿಂದ ಗೋಮಾಳ ಜಮೀನು ಮಂಜೂರು ಮಾಡಿದ್ದು, ಸದರಿ ಜಮೀನನ್ನು ಸಾಗುವಳಿ ಮಾಡುತ್ತಿದ್ದು, ಸಾಗುವಳಿ ಚೀಟಿಯಲ್ಲಿ 15 ವರ್ಷಗಳ ಕಾಲ ಅಂದರೆ 01–09–1986 ರಿಂದ ಯಾವುದೇ ವ್ಯಕ್ತಿಗೆ ಪರಭಾರೆ ಮಾಡಬಾರದೆಂದು ನಿರ್ಬಂಧವಿದ್ದರೂ ಸಹ ದೇವನಹಳ್ಳಿ ತಹಶೀಲ್ದಾರರಾಗಿದ್ದ ಶ್ರೀ ಸಂಪತ್‌ಕುಮಾರ್ ಇವರು ರಾಜಸ್ವ ನಿರೀಕ್ಷಕರ ವರದಿಯ ಮೇಲೆ, ದಿನಾಂಕ:15.10.2007 ರಲ್ಲಿ ಸದರಿ ಜಮೀನನ್ನು ಚನ್ನರಾಯಪ್ಪ ಬಿನ್ ಪಾಪಣ್ಣ ಎಂಬುದಾಗಿ ತಿದ್ದುಪಡಿ ಆದೇಶ ಮಾಡಿರುತ್ತಾರೆ. ಈ ಬಗ್ಗೆ ಮುನಿಶಾಮಪ್ಪ ಬಿನ್ ಚನ್ನರಾಯಪ್ಪ ಅವರು ಲೋಕಾಯುಕ್ತರಿಗೆ ದೂರು ಸಲ್ಲಿಸಿರುತ್ತಾರೆ. ತಹಶೀಲ್ದಾರರು ತಿದ್ದುಪಡಿ ಆದೇಶವನ್ನು ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ. ಈ ರೀತಿ ಕರ್ತವ್ಯ ಚ್ಯುತಿ ಎಸಗಿರುವ ಸದರಿ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮ ಜರುಗಿಸಲು, ಕರ್ನಾಟಕ ಲೋಕಾಯುಕ್ತ ಕಾಯ್ದೆ ಅಧಿನಿಯಮ 2(3) ರನ್ವಯ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಇಂತಹ ಕ್ರಮವನ್ನು ಕೈಗೊಂಡ ಬಗ್ಗೆ ಸದರಿ ಕಾಯ್ದೆಯ 12(4) ರನ್ವಯ 3 ತಿಂಗಳೊಳಗೆ ಮಾನ್ಯ ಲೋಕಾಯುಕ್ತರವರಿಗೆ ಮಾಹಿತಿ ನೀಡುವಂತೆ ಕೋರಿ ಹಾಗೂ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವೆ ನಿಯಮಾವಳಿಗಳ ನಿಯಮ 14(ಎ) ರಡಿಯಲ್ಲಿ ವಿಚಾರಣೆಯನ್ನು ಉಪಲೋಕಾಯುಕ್ತರಿಗೆ ವಹಿಸಲು ಸಹ ಕೋರಿರುವರು.

ಮಾನ್ಯ ಉಪಲೋಕಾಯುಕ್ತರ ವರದಿಯನ್ನು ಪರಿಶೀಲಿಸಿ, ಸರ್ಕಾರವು ಈ ಪ್ರಕರಣದಲ್ಲಿ ಆರೋಪಿತರೆಂದು ಹೇಳಲಾಗಿರುವ ಶ್ರೀ ಸಂಪತ್‌ಕುಮಾರ್, ಹಿಂದಿನ ತಹಶೀಲ್ದಾರ್, ದೇವನಹಳ್ಳಿ (ಪ್ರಸ್ತುತ ನೇಮಕಾತಿ ನಿರೀಕ್ಷಣೆಯಲ್ಲಿರುವ) ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(ಎ) ರನ್ವಯ ವಿಚಾರಣೆ ನಡೆಸಲು ಹಾಗೂ ಸದರಿ ನಿಯಮಾವಳಿಗಳು ನಿಯಮ 14(ಎ) ರಡಿಯಲ್ಲಿ ಪ್ರಸ್ತುತ ಪ್ರಕರಣವನ್ನು ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಕಂಇ 06 ಎಡಿಇ 2009, ಬೆಂಗಳೂರು, ದಿನಾಂಕ: 11ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದ ಸರ್ಕಾರವು ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು (ಪ್ರಸ್ತುತ ಸ್ಥಳ ನೇಮಕಾತಿ ನಿರೀಕ್ಷಣೆಯಲ್ಲಿ) ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ 1957ರ ನಿಯಮ 11(ಎ) ರನ್ವಯ ಕೂಲಂಕಷ ವಿಚಾರಣೆ ನಡೆಸುವ ಸಲುವಾಗಿ ಸದರಿ ನಿಯಮಾವಳಿಯ ನಿಯಮ 14(ಎ) ರ ಅಡಿಯಲ್ಲಿ ವಿಚಾರಣೆ ಜರುಗಿಸಿ, ಸರ್ಕಾರಕ್ಕೆ ವರದಿ ನೀಡಲು ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1288 **ಬಿ.ವಿ.ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಎಫ್.ಬಿ. ನಂದಗಡಿ, ಹಿಂದಿನ ತಹಶೀಲ್ದಾರ್, ಬಾದಾಮಿ ಬಾಗಲಕೋಟೆ ಜಿಲ್ಲೆ (ಹಾಲಿ ನಿವೃತ್ತರು) ಇವರಿಗೆ 1 ರಿಂದ 4 ರವರೆಗೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಮಹಾಲೇಖಪಾಲರ ಪತ್ರ ಸಂ : ಆರ್–5 Vol-1-518-177-118, Dt : 05-05-2003.

2) ಸರ್ಕಾರದ ಆದೇಶ ಸಂ: ಆರ್ ಡಿ 183 ಎಎಸ್‌ಡಿ 2004, ದಿನಾಂಕ : 03–07–2008.

3) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರ ಪತ್ರ ಸಂ:GE-1/RS/08-09/401-02, Dt:04-08-2008, Dt : 04-03-2004 & Dt: 04-08-2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಸಂ. (1)ರ ಮಹಾಲೇಖಪಾಲರ ಪತ್ರದ ಅನುಸಾರ, ಶ್ರೀ ಎಫ್.ಬಿ.ನಂದಗಡಿ, ನಿವೃತ್ತ ತಹಶೀಲ್ದಾರ್, ಇವರಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 03–07–2008 ರ ಆದೇಶದಲ್ಲಿ 4 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಲಾಗಿತ್ತು. ಆದರೆ, ಮೇಲೆ (3) ರಲ್ಲಿ ಓದಲಾದ ಮಹಾಲೇಖಪಾಲರು, ಬೆಂಗಳೂರು ಇವರ ದಿನಾಂಕ:04.08.2008 ರಲ್ಲಿ ಸದರಿ ಅಧಿಕಾರಿಯವರು ಈ ಕೆಳಕಂಡಂತೆ ಸ್ಥಗಿತ ವೇತನ ಬಡ್ತಿಗಳಿಗೆ ಅರ್ಹರಿರುವುದಾಗಿ ತಿಳಿಸಿ ಪರಿಷ್ಕೃತ ಆದೇಶ ಹೊರಡಿಸಲು ಕೋರಿರುವರು.

**ದಿನಾಂಕ: 01–01–1999 ವೇತನ ಶ್ರೇಣಿ 2050–3950–ಮೊದಲನೇ ಸ್ಥಗಿತ ಮುಂಬಡ್ತಿ ವೇತನ ಮಂಜೂರು ಮಾಡಿದೆ.**

**ದಿನಾಂಕ: 01–01–2003 ವೇತನ ಶ್ರೇಣಿ 6000–11,200–ಎರಡನೇ ಸ್ಥಗಿತ ವೇತನ ಬಡ್ತಿ**

**ದಿನಾಂಕ: 01–01–2004 ವೇತನ ಶ್ರೇಣಿ 6000–11,200–ಮೂರನೇ ಸ್ಥಗಿತ ವೇತನ ಬಡ್ತಿ**

**ದಿನಾಂಕ: 01–01–2005 ವೇತನ ಶ್ರೇಣಿ 6000–11,200–ನಾಲ್ಕನೇ ಸ್ಥಗಿತ ವೇತನ ಬಡ್ತಿ**

ಸದರಿ ಅಧಿಕಾರಿಯವರು ದಿನಾಂಕ: 30.6.2006 ರಂದು ಸೇವೆಯಿಂದ ನಿವೃತ್ತಿ ಹೊಂದಿರುತ್ತಾರೆ. ಮೇಲ್ಕಂಡಂತೆ ಶ್ರೀ ಎಫ್.ಬಿ. ನಂದಗಡಿ, ನಿವೃತ್ತ ತಹಶೀಲ್ದಾರ್ ಇವರಿಗೆ ಪ್ರಸ್ತುತ ಆದೇಶದ ಮುಖಾಂತರ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಬೇಕಾಗಿರುವುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 438 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 12ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರದ ಆದೇಶ ಸಂ: ಆರ್‌ಡಿ 183 ಎಎಸ್‌ಡಿ 2004, ದಿನಾಂಕ : 03–07–2008 ನ್ನು ಭಾಗಶಃ ಮಾರ್ಪಡಿಸಿ, ಶ್ರೀ ಎಫ್.ಬಿ. ನಂದಗಡಿ ತಹಶೀಲ್ದಾರ್, ಬಾದಾಮಿ, ಬಾಗಲಕೋಟೆ ಜಿಲ್ಲೆ (ಪ್ರಸ್ತುತ ನಿವೃತ್ತರು) ಇವರಿಗೆ ಈ ಕೆಳಕಂಡ ಸ್ಥಗಿತ ವೇತನ ಮಂಜೂರು ಮಾಡಿ ಪರಿಷ್ಕೃತ ಆದೇಶ ಹೊರಡಿಸಿದೆ.

**ದಿನಾಂಕ: 01–01–2003 ವೇತನ ಶ್ರೇಣಿ 6000–11,200–ಎರಡನೇ ಸ್ಥಗಿತ ವೇತನ ಬಡ್ತಿ**

**ದಿನಾಂಕ: 01–01–2004 ವೇತನ ಶ್ರೇಣಿ 6000–11,200 – ಮೂರನೇ ಸ್ಥಗಿತ ವೇತನ ಬಡ್ತಿ**

**ದಿನಾಂಕ: 01–01–2005 ವೇತನ ಶ್ರೇಣಿ 6000–11,200 ನಾಲ್ಕನೇ ಸ್ಥಗಿತ ವೇತನ ಬಡ್ತಿ**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1289 **ಬಿ.ವಿ.ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀಮತಿ ಕಮಲಮ್ಮ, ಗ್ರೂಪ್–ಎ (ಕಿರಿಯ ಶ್ರೇಣಿ) ಅಧಿಕಾರಿ (ನಿವೃತ್ತ) ಹಾಗೂ ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿ, ಶ್ರೀ ಚಾಮುಂಡೇಶ್ವರಿ ದೇವಾಲಯ, ಚಾಮುಂಡಿಬೆಟ್ಟ, ಮೈಸೂರು ಇವರ ವಿರುದ್ಧ ಇಲಾಖಾ ವಿಚಾರಣೆ – ದಂಡನೆ ವಿಧಿಸುವ ಬಗ್ಗೆ – ಅಂತಿಮ ಆದೇಶ.

**ಓದಲಾಗಿದೆ:** (1) ಶ್ರೀಮತಿ ಕಮಲಮ್ಮ ನಿವೃತ್ತ ಗ್ರೂಫ್–ಎ ಅಧಿಕಾರಿ ಇವರಿಗೆ ದೋಷಾರೋಪಣ ಪಟ್ಟಿಯೊಂದಿಗೆ ಜಾರಿ ಮಾಡಲಾದ ತಿಳುವಳಿಕೆ ಪತ್ರ ಸಂಖ್ಯೆ : ಕಂಇ 315 ಮುಸೇವಿ 1999 ದಿನಾಂಕ:16.03.2004

(2) ಆಪಾದಿತ ಅಧಿಕಾರಿಯು ತಿಳುವಳಿಕೆ ಪತ್ರಕ್ಕೆ ಉತ್ತರಿಸಲು ಕಾಲಾವಕಾಶ ಕೋರಿರುವ ಪತ್ರಗಳು ದಿನಾಂಕ:25.03.2004, 24.04.2004 ಮತ್ತು 11.08.2004

(3) ಸರ್ಕಾರದ ಆದೇಶ ಸಂಖ್ಯೆ: ಕಂಇ 315 ಮುಸೇವಿ 1999 ದಿನಾಂಕ: 28.12.2004

(4) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 06.07.2008

(5) ಆಪಾದಿತ ಅಧಿಕಾರಿಗೆ ಜಾರಿ ಮಾಡಲಾದ 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಂಇ 315 ಮುಸೇವಿ 1999 ದಿನಾಂಕ:02.08.2008

(6) 2ನೇ ಕಾರಣ ಕೇಳುವ ನೋಟೀಸ್‌ಗೆ ಆಪಾದಿತ ಅಧಿಕಾರಿಯು ನೀಡಿರುವ ಲಿಖಿತ ಹೇಳಿಕೆ ದಿನಾಂಕ:30.09.2008

(7) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 159 ಸಿಎನ್‌ಎಸ್ 2008 ದಿನಾಂಕ:30.03.2009

**ಪ್ರಸ್ತಾವನೆ:**

ಶ್ರೀಮತಿ ಕಮಲಮ್ಮ, ಸಮೂಹ–ಎ ಅಧಿಕಾರಿ (ನಿವೃತ್ತ), ಧಾರ್ಮಿಕ ದತ್ತಿ ಇಲಾಖೆ ಇವರು ಈ ಹಿಂದೆ ಕಾರ್ಯನಿರ್ವಹಣಾಧಿಕಾರಿ ಶ್ರೀ ಚಾಮುಂಡೇಶ್ವರಿ ದೇವಸ್ಥಾನ, ಚಾಮುಂಡಿಬೆಟ್ಟ, ಮೈಸೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಈ ಕೆಳಕಂಡ ಆರೋಪಗಳ ಮೇಲೆ ಸರ್ಕಾರವು ಸದರಿ ಅಧಿಕಾರಿಯ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳುವ ನಿಟ್ಟಿನಲ್ಲಿ ದೋಷಾರೋಪಣಾ ಪಟ್ಟಿಯನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ: 16.03.2004ರ ತಿಳುವಳಿಕೆ ಪತ್ರದ ಮೂಲಕ ಜಾರಿ ಮಾಡಲಾಗಿತ್ತು:–

**ಆರೋಪ–1:** ಮೈಸೂರು ಅರಮನೆ ಶ್ರೀ ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನದಲ್ಲಿ ದಿನಾಂಕ: 24.08.1999 ರಿಂದ 04.09.1999 ನಡೆದ ಬ್ರಹ್ಮೋತ್ಸವ ಹಾಗೂ ದಿನಾಂಕ:04.09.1999 ರಿಂದ 12.09.1999 ರವರೆಗೆ ನಡೆದ ಕೃಷ್ಣೋತ್ಸವ ಉತ್ಸವಾಧಿಗಳಿಗೆ ಮಂಜೂರಾದ ಮೊತ್ತವನ್ನು ನಿಗಧಿತ ಸಮಯದಲ್ಲಿ ದೇವತಾ ಕಾರ್ಯಗಳಿಗೆ ಬಿಡುಗಡೆ ಮಾಡದೇ ಉತ್ಸವಾದಿಗಳು ಸುಗಮವಾಗಿ ನಡೆಸಲು ಸಹಕರಿಸದೇ ಉತ್ಸವಗಳು ಮುಗಿದ ನಂತರ ಓಚರ್ ನೀಡಿ ಹಣ ದುರುಪಯೋಗಪಡಿಸಿಕೊಂಡು ಕರ್ತವ್ಯ ಲೋಪ ಎಸಗಿರುವುದು.

**ಆರೋಪ–2:** ಮೈಸೂರು ಅರಮನೆ ಶ್ರೀ ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನದಲ್ಲಿ ದಿನಾಂಕ: 24.08.1999 ರಿಂದ 12.09.1999ರವರೆಗೆ ನಡೆದ ಬ್ರಹ್ಮೋತ್ಸವ ಹಾಗೂ ಕೃಷ್ಣೋತ್ಸವದ ವಿಶೇಷ ಧಾರ್ಮಿಕ ಕಾರ್ಯಕ್ರಮಗಳು ನಡೆಯುವುದು ತಿಳಿದಿದ್ದರೂ ಸಹ ದಿನಾಂಕ:04.09.1999 ರಿಂದ 14.09.1999 ರವರೆಗೆ ದೇವಸ್ಥಾನದ ಕಛೇರಿಗೆ ಹಾಜರಾಗದೇ ದೇವತಾ ಕಾರ್ಯಕ್ರಮಗಳು ಸುಗುಮವಾಗಿ ನಡೆಯಲು ಸಹಕರಿಸದೇ, ಉದ್ದೇಶ ಪೂರ್ವಕವಾಗಿ ಗೈರು ಹಾಜರಾಗಿ ಕರ್ತವ್ಯ ಲೋಪ ಎಸಗಿರುವುದು.

**ಆರೋಪ–3:** ಮೈಸೂರು ಅರಮನೆ ಕೋಟೆ ಶ್ರೀ ವಿನಾಯಕಸ್ವಾಮಿ ಹಾಗೂ ಶ್ರೀ ಆಂಜನೇಯಸ್ವಾಮಿ ಮತ್ತು ಇತರೆ ದೇವಸ್ಥಾನಗಳ ಪುದುವಟ್ಟು ಹಣವನ್ನು ಏಪ್ರಿಲ್ 1999 ರಿಂದ ನವೆಂಬರ್ ಮಾಹೆ 1999ರವರೆಗೆ ರೂ. 18,653.00 ಗಳನ್ನು ಅರಮನೆ ಮುಜರಾಯಿ ದೇವಸ್ಥಾನಗಳ ವ್ಯವಸ್ಥಾಪಕರಿಗೆ ನಿಗಧಿತ ಅವಧಿಯಲ್ಲಿ ಬಿಡುಗಡೆ ಮಾಡದೇ ಪುದುವಟ್ಟು ಸೇವಾರ್ಥದಾರರು ಇಚ್ಚಿಸಿದ ಸೇವೆಗಳು ನಿಗಧಿತ ದಿನಾಂಕಗಳಂದು ನಡೆಸಲು ಅವಕಾಶ ಕಲ್ಪಿಸದೇ, ಕರ್ತವ್ಯ ಲೋಪ ಎಸಗಿರುವುದು.

ಸದರಿ ತಿಳುವಳಿಕೆ ಪತ್ರಕ್ಕೆ ಉತ್ತರಿಸಲು ಆಪಾದಿತ ಅಧಿಕಾರಿಯು ದಿನಾಂಕ: 20.05.2004 ರವರೆಗೆ ಕಾಲಾವಕಾಶ ಕೋರಿದ್ದು, ತದನಂತರ ಕೊನೆಯದಾಗಿ ದಿನಾಂಕ:11.08.2004 ರಂದು ಮನವಿ ಸಲ್ಲಿಸಿ, ಪುನಃ 15 ದಿನಗಳ ಕಾಲಾವಕಾಶವನ್ನು ಕೋರಿದ್ದರು. ಸರ್ಕಾರವು ಸಮಯಾವಕಾಶವನ್ನು ನೀಡಿದ್ದರೂ ಆಪಾದಿತ ಅಧಿಕಾರಿಯು ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸದೇ ಇರುವುದರಿಂದ ಸದರಿಯವರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ವಿವರವಾದ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಸ್. ಇಂಧೂದರ್, ನಿವೃತ್ತ ಜಿಲ್ಲಾ ಮತ್ತು ಸೆಷೆನ್ಸ್ ನ್ಯಾಯಾಧೀಶರನ್ನು ಮೇಲೆ (3) ರಲ್ಲಿ ಓದಲಾದ ದಿನಾಂಕ: 28.12.2004 ರ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಯವರು ವಿವರವಾದ ಇಲಾಖಾ ವಿಚಾರಣೆಯನ್ನು ಕೈಗೊಂಡು ಮೇಲೆ (4) ರಲ್ಲಿ ಓದಲಾದ ದಿನಾಂಕ: 06.07.2008 ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ, ವಿಚಾರಣಾಧಿಕಾರಿಯವರು ತಮ್ಮ ವರದಿಯಲ್ಲಿ ಆರೋಪಿತರ ವಿರುದ್ಧದ ಆರೋಪಗಳು ಸಾಭೀತಾಗಿರುವುದಾಗಿ ಅಭಿಪ್ರಾಯಪಟ್ಟಿರುತ್ತಾರೆ.

ವಿಚಾರಣಾಧಿಕಾರಿಯವರ ವಿಚಾರಣಾ ವರದಿಯನ್ನು ಮೇಲೆ (5)ರಲ್ಲಿ ಓದಲಾದ ದಿನಾಂಕ: 02.08.2008 2ನೇ ಕಾರಣ ಕೇಳುವ ನೋಟೀಸಿನೊಂದಿಗೆ ಆಪಾದಿತ ಅಧಿಕಾರಿಗೆ ಜಾರಿ ಮಾಡಿ ತಮ್ಮ ಲಿಖಿತ ಹೇಳಿಕೆಯನ್ನು ನೀಡುವಂತೆ ಕೋರಲಾಗಿತ್ತು. ಅದರಂತೆ ಆಪಾದಿತರು ಮೇಲೆ (6) ರಲ್ಲಿ ಓದಲಾದ ದಿನಾಂಕ: 30.09.2008ರ ಪತ್ರದಲ್ಲಿ ತಮ್ಮ ಲಿಖಿತ

ಹೇಳಿಕೆಯನ್ನು ಸಲ್ಲಿಸುತ್ತಾ, ಆಪಾದಿತರು ಮಂಡಿಸಿರುವ ಸಾಕ್ಷ್ಯಾಧಾರಗಳನ್ನಾಗಲೀ, ವಾದ–ವಿವಾದಗಳನ್ನಾಗಲೀ ವಿಚಾರಣಾಧಿಕಾರಿಯವರು ಪರಿಗಣಿಸಿರುವುದಿಲ್ಲವೆಂದು ತಿಳಿಸುತ್ತಾ, ವಿಚಾರಣಾ ವರದಿಯನ್ನು ಪರಿಗಣಿಸದೇ ತಿರಸ್ಕರಿಸಿ ತಮ್ಮನ್ನು ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಶಿಸ್ತು ಪ್ರಾಧಿಕಾರವಾದ ಸರ್ಕಾರವು ವಿಚಾರಣಾ ವರದಿಯನ್ನು, ಆಪಾದಿತ ಅಧಿಕಾರಿಯ ಲಿಖಿತ ಹೇಳಿಕೆ ಮತ್ತು ದಾಖಲೆಗಳನ್ನು ಪರಿಶೀಲಿಸಲಾಗಿ, ಆರೋಪಿತರಿಂದ ಸರ್ಕಾರಕ್ಕಾಗಲೀ ಅಥವಾ ದೇವಸ್ಥಾನಕ್ಕಾಗಲೀ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದು ಕಂಡು ಬರುವುದಿಲ್ಲವಾದರೂ ಸಕಾಲಕ್ಕೆ ಹಣ ಬಿಡುಗಡೆ ಮಾಡದಿರುವ ಹಾಗೂ ವಿಶೇಷ ದೇವತಾ ಕಾರ್ಯಗಳ ಸಮಯದಲ್ಲಿ ಗೈರು ಹಾಜರಾಗಿರುವ ಅವರ ಕರ್ತವ್ಯ ಲೋಪಗಳ ಗಂಭೀರತೆಯನ್ನು ಪರಿಗಣಿಸಿ, ಸದರಿಯವರಿಗೆ ಅವರ ನಿವೃತ್ತಿ ವೇತನದಲ್ಲಿ ಶೇ. 10 ರಷ್ಟನ್ನು ಒಂದು ವರ್ಷದ ಅವಧಿಯವರೆಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿರುತ್ತದೆ.

ಸದರಿಯವರಿಗೆ ದಂಡನೆಯನ್ನು ವಿಧಿಸಲು ತೀರ್ಮಾನಿಸಿರುವ ಸರ್ಕಾರದ ಪ್ರಸ್ತಾವನೆಗೆ ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ (7)ರಲ್ಲಿ ಓದಲಾದ ದಿನಾಂಕ: 30.03.2009ರ ಪತ್ರದಲ್ಲಿ ಸಹಮತಿ ನೀಡಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 315 ಮುಸೇವಿ1999, ಬೆಂಗಳೂರು, ದಿನಾಂಕ: 11ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀಮತಿ ಕಮಲಮ್ಮ, ನಿವೃತ್ತ ಗ್ರೂಪ್–ಎ ಅಧಿಕಾರಿ, ಧಾರ್ಮಿಕ ದತ್ತಿ ಇವರು ಎಸಗಿರುವ ಕರ್ತವ್ಯ ಲೋಪದ ಗಂಭೀರತೆಯನ್ನು ಪರಿಗಣಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214(1)(ಎ) ರನ್ವಯ ಸದರಿಯವರ ನಿವೃತ್ತಿ ವೇತನದಲ್ಲಿ ಶೇ. 10ರಷ್ಟು ನಿವೃತ್ತಿ ವೇತನವನ್ನು ಒಂದು ವರ್ಷದ ಅವಧಿಯವರೆಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 159 ಸಿಎನ್‌ಎಸ್ 2008 ದಿನಾಂಕ:30.03.2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1290

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ)

**ವಿಷಯ:** ಶ್ರೀ ಕೆ.ಪಿ. ಸಿದ್ದಪ್ಪ, ಗ್ರೂಪ್–ಎ ಅಧಿಕಾರಿ (ನಿವೃತ್ತ) ಹಾಗೂ ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿ, ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಾಲಯ, ನಂಜನಗೂಡು ಇವರ ವಿರುದ್ಧ ಇಲಾಖಾ ವಿಚಾರಣೆ ದಂಡನೆ ವಿಧಿಸುವ ಬಗ್ಗೆ – ಅಂತಿಮ ಆದೇಶ.

**ಓದಲಾಗಿದೆ:** (1) ಶ್ರೀ ಕೆ.ಪಿ. ಸಿದ್ಧಪ್ಪ ಸಮೂಹ–ಎ ಅಧಿಕಾರಿ (ನಿವೃತ್ತ) ಇವರಿಗೆ ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿ ಮಾಡಲಾದ ತಿಳುವಳಿಕೆ ಪತ್ರ ಸಂಖ್ಯೆ: ಕಂಇ 20 ಮುಸೇವಿ 2003 ದಿನಾಂಕ:23.08.2003

(2) ಆಪಾದಿತ ಅಧಿಕಾರಿಯು ತಿಳುವಳಿಕೆ ಪತ್ರಕ್ಕೆ ನೀಡಿರುವ ಲಿಖಿತ ಉತ್ತರ ದಿನಾಂಕ:06.10.2003

(3) ಸರ್ಕಾರದ ಆದೇಶ ಸಂಖ್ಯೆ: ಕಂಇ 20 ಮುಸೇವಿ 2003 ದಿನಾಂಕ:18.05.2005

(4) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ:04.07.2008

(5) ಆಪಾದಿತ ಅಧಿಕಾರಿಗೆ ಜಾರಿ ಮಾಡಲಾದ 2ನೇ ಕಾರಣ ಕೇಳುವ ನೋಟೀಸ್ ಸಂ. ಕಂಇ 20 ಮುಸೇವಿ 2003 ದಿನಾಂಕ: 1.08.2008

(6) 2ನೇ ಕಾರಣ ಕೇಳುವ ನೋಟೀಸಿಗೆ ಆಪಾದಿತ ಅಧಿಕಾರಿಯು ನೀಡಿರುವ ಲಿಖಿತ ಉತ್ತರ ದಿನಾಂಕ:22.09.2009.

(7) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂ. ಪಿಎಸ್‌ಸಿ 169 ಸಿಎನ್‌ಎಸ್ 2008 ದಿನಾಂಕ:30.03.2009.

**ಪ್ರಸ್ತಾವನೆ:**

ಶ್ರೀ ಕೆ.ಪಿ.ಸಿದ್ದಪ್ಪ ಸಮೂಹ–ಎ ಅಧಿಕಾರಿ (ನಿವೃತ್ತ) ಇವರು ದಿನಾಂಕ 23.09.2998 ರಿಂದ 03.07.2000 ರವರೆಗೆ ನಂಜನಗೂಡಿನ ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನದ ಕಾರ್ಯನಿರ್ವಹಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಿದ ಅವಧಿಯಲ್ಲಿ ಸದರಿ ದೇವಾಲಯಕ್ಕೆ ಸೇರಿದ ಶ್ರೀ ಪ್ರಸನ್ನ ಚಿಂತಾಮಣಿ ಗಣಪತಿ ದೇವಾಲಯದ ಕಟ್ಟಿನ ಗಾಲಿ ದುರಸ್ಥಿಗಾಗಿ ಒಂದು ಪ್ರಕಟಣೆ ನೀಡಿ, ಒಂದೇ ಕೆಲಸವನ್ನು ಹತ್ತು ತುಂಡುಗಳನ್ನಾಗಿ ವಿಭಜಿಸಿ, ಹತ್ತು ಕೊಟೇಷನ್‌ಗಳನ್ನು ಅಂಗೀಕರಿಸಿ, ತಲಾ ರೂ. 10,000/– ಗಳಂತೆ ಒಟ್ಟು ರೂ. 1.00 ಲಕ್ಷ ದೇವಾಲಯದ ಹಣವನ್ನು ಮೇಲಾಧಿಕಾರಿಗಳ ಮಂಜೂರಾತಿ ಪಡೆಯದೆ ಕಟ್ಟಿನ ಗಾಲಿ ರಿಪೇರಿಗೆ ಪಾವತಿಸಿ, ಅಧಿಕಾರ ದುರುಪಯೋಗ ಪಡಿಸಿಕೊಂಡಿರುವ ಆರೋಪಕ್ಕೆ ಸಂಬಂಧಿಸಿದಂತೆ ಸದರಿಯವರ ವಿರುದ್ದ ಶಿಸ್ತು

ಕ್ರಮ ಕೈಗೊಳ್ಳುವ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರ ಮೇರೆಗೆ ದೋಷಾರೋಪಣಾ ಪಟ್ಟಿಯನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ: 23.08.2003 ರ ತಿಳುವಳಿಕೆ ಪತ್ರದ ಮೂಲಕ ಜಾರಿ ಮಾಡಲಾಗಿತ್ತು.

ತಿಳುವಳಿಕೆ ಪತ್ರಕ್ಕೆ ಆಪಾದಿತರು ಮೇಲೆ (2) ರಲ್ಲಿ ಓದಲಾದ ದಿನಾಂಕ:06.10.2003ರ ಪತ್ರದಲ್ಲಿ ತಮ್ಮ ಲಿಖಿತ ಹೇಳಿಕೆಯನ್ನು ನೀಡಿ ತಮ್ಮ ವಿರುದ್ಧದ ಆರೋಪಗಳನ್ನು ತಳ್ಳಿ ಹಾಕಿ ತಮ್ಮನ್ನು ದೋಷಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ. ಆದ್ದರಿಂದ ಸದರಿಯವರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ವಿವರವಾದ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಸ್. ಇಂಧೂದರ್, ನಿವೃತ್ತ ಜಿಲ್ಲಾ ಮತ್ತು ಸೆಷೆನ್ಸ್ ನ್ಯಾಯಾಧೀಶರು ಇವರನ್ನು ಮೇಲೆ (3) ರಲ್ಲಿ ಓದಲಾದ ದಿನಾಂಕ: 18.05.2005ರ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಯವರು ವಿವರವಾದ ಇಲಾಖಾ ವಿಚಾರಣೆ ಕೈಗೊಂಡು ಮೇಲೆ (4) ರಲ್ಲಿ ಓದಲಾದ ದಿನಾಂಕ:04.07.2008 ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ. ವಿಚಾರಣಾಧಿಕಾರಿಯವರು ತಮ್ಮ ವರದಿಯಲ್ಲಿ ಆರೋಪಿತರ ವಿರುದ್ಧದ ಆರೋಪಗಳು ಸಾಬೀತಾಗಿರುವುದಾಗಿ ಅಭಿಪ್ರಾಯಪಟ್ಟಿರುತ್ತಾರೆ.

ವಿಚಾರಣಾಧಿಕಾರಿಯವರ ವಿಚಾರಣಾ ವರದಿಯನ್ನು ಮೇಲೆ (5)ರಲ್ಲಿ ಓದಲಾದ 2ನೇ ಕಾರಣ ಕೇಳುವ ನೋಟೀಸ್‌ನೊಂದಿಗೆ ಆಪಾದಿತ ಅಧಿಕಾರಿಗೆ ಜಾರಿ ಮಾಡಿ ತಮ್ಮ ಲಿಖಿತ ಹೇಳಿಕೆಯನ್ನು ನೀಡುವಂತೆ ಕೋರಲಾಗಿತ್ತು. ಅದರಂತೆ ಆಪಾದಿತರು ಮೇಲೆ (6) ರಲ್ಲಿ ಓದಲಾದ ದಿನಾಂಕ: 22.09.2008 ರಂದು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿ, ತಮ್ಮನ್ನು ಆರೋಪದಿಂದ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಶಿಸ್ತು ಪ್ರಾಧಿಕಾರವಾದ ಸರ್ಕಾರವು, ವಿಚಾರಣಾ ವರದಿ, ಆಪಾದಿತ ಅಧಿಕಾರಿಯ ಲಿಖಿತ ಹೇಳಿಕೆ ಮತ್ತು ಸಂಬಂಧಿತ ದಾಖಲೆಗಳನ್ನು ಪರಿಶೀಲಿಸಲಾಗಿ, ಸದರಿ ಪ್ರಕರಣದಲ್ಲಿ ದೇವಾಲಯಕ್ಕೆ ಮತ್ತು ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿಲ್ಲದಿದ್ದರೂ, ಆರೋಪಿತ ಅಧಿಕಾರಿಯು ಅಧಿಕಾರ ದುರುಪಯೋಗಪಡಿಸಿಕೊಂಡು ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುವುದರಿಂದ ಆರೋಪಿತ ನಿವೃತ್ತ ಅಧಿಕಾರಿಯ ವಿರುದ್ಧ ರುಜುವಾತಾದ ಆರೋಪದ ಗಂಭೀರತೆಯನ್ನು ಗಣನೆಗೆ ತೆಗೆದುಕೊಂಡು, ಸದರಿಯವರ ನಿವೃತ್ತಿ ವೇತನದಲ್ಲಿ ಪ್ರತಿ ತಿಂಗಳು ರೂ. 500/– (ಐದು ನೂರು ಮಾತ್ರ) ಒಂದು ವರ್ಷದ ಅವಧಿಗೆ ಕಡಿತಗೊಳಿಸುವ ದಂಡನೆ ವಿಧಿಸಲು ತೀರ್ಮಾನಿಸಿರುತ್ತದೆ.

ಸದರಿಯವರಿಗೆ ದಂಡನೆ ವಿಧಿಸಲು ತೀರ್ಮಾನಿಸಿರುವ ಸರ್ಕಾರದ ಪ್ರಸ್ತಾವನೆಗೆ ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ (7) ರಲ್ಲಿ ಓದಲಾದ ದಿನಾಂಕ: 30.03.2009 ರಲ್ಲಿ ಪತ್ರದಲ್ಲಿ ಸಹಮತಿ ನೀಡಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 20 ಮುಸೇವಿ 2003, ಬೆಂಗಳೂರು, ದಿನಾಂಕ: 11ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಕೆ.ಪಿ. ಸಿದ್ದಪ್ಪ, ಸಮೂಹ–ಎ ಅಧಿಕಾರಿ (ನಿವೃತ್ತ) ಧಾರ್ಮಿಕ ದತ್ತಿ ಇಲಾಖೆ ಇವರ ವಿರುದ್ಧ ರುಜುವಾತಾದ ಆರೋಪದ ಗಂಭೀರತೆಯನ್ನು ಗಣನೆಗೆ ತೆಗೆದುಕೊಂಡು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 214 (1) (ಎ) ಪ್ರಕಾರ ಸದರಿ ಅಧಿಕಾರಿಯ ನಿವೃತ್ತಿ ವೇತನದಲ್ಲಿ ಪ್ರತಿ ತಿಂಗಳು ರೂ. 500/– (ಐದು ನೂರು ರೂಪಾಯಿಗಳು ಮಾತ್ರ) ರಂತೆ ಒಂದು ವರ್ಷದ ಅವಧಿಗೆ ನಿವೃತ್ತಿ ವೇತನವನ್ನು ಕಡಿತಗೊಳಿಸುವ ದಂಡನೆಯನ್ನು ವಿಧಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 169 ಸಿಎಸ್‌ಎಸ್ 2008 ದಿನಾಂಕ: 30.03.2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1291

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ)

**ವಿಷಯ:** ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ, ನಿವೃತ್ತ ಸಮೂಹ–ಎ ಅಧಿಕಾರಿ ಹಾಗೂ ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿ ಕುಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನ ಇವರ ವಿರುದ್ಧದ ಇಲಾಖಾ ವಿಚಾರಣೆ– ದಂಡನೆ ವಿಧಿಸುವ ಬಗ್ಗೆ– ಅಂತಿಮ ಆದೇಶ.

**ಓದಲಾಗಿದೆ:** (1) ಶ್ರೀ ಎಂ.ಎಸ್. ವೆಂಕಟೇಶಮೂರ್ತಿ, ಸಮೂಹ–ಎ ಅಧಿಕಾರಿ (ನಿವೃತ್ತ) ಇವರಿಗೆ ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿ ಮಾಡಲಾದ ತಿಳುವಳಿಕೆ ಪತ್ರ ಸಂಖ್ಯೆ: ಕಂಇ 159 ಮುಸೇವಿ 2003 ದಿನಾಂಕ:16.09.2003

(2) ಶ್ರೀ ಎಂ. ಎಸ್. ವೆಂಕಟೇಶಮೂರ್ತಿ ಇವರು ತಿಳುವಳಿಕೆ ಪತ್ರಕ್ಕೆ ನೀಡಲಾದ ಲಿಖಿತ ಉತ್ತರ ದಿನಾಂಕ:07.01.2004

(3) ಸರ್ಕಾರದ ಆದೇಶ ಸಂಖ್ಯೆ : ಕಂಇ 159 ಮುಸೇವಿ 2003 ದಿನಾಂಕ:08.03.2004
(4) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ:18.08.2004
(5) ಶ್ರೀ ಎಂ.ಎಸ್. ವೆಂಕಟೇಶಮೂರ್ತಿ ಇವರಿಗೆ ಜಾರಿ ಮಾಡಲಾದ 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಕಂಇ 159 ಮುಸೇವಿ 2003 ದಿನಾಂಕ:27.09.2004
(6) 2ನೇ ಕಾರಣ ಕೇಳುವ ನೋಟೀಸ್‌ಗೆ ಆಪಾದಿತರ ಲಿಖಿತ ಹೇಳಿಕೆ ದಿನಾಂಕ: 28.10.2004
(7) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 145 ಸಿಎನ್‌ಎಸ್ 2008 ದಿನಾಂಕ:30.03.2009

**ಪ್ರಸ್ತಾವನೆ:**

ಶ್ರೀ ಎಂ.ಎಸ್. ವೆಂಕಟೇಶ್ ಮೂರ್ತಿ, ಸಮೂಹ–ಎ ಅಧಿಕಾರಿ (ನಿ) ಇವರು ಈ ಹಿಂದೆ ಕಾರ್ಯನಿರ್ವಾಹಕ ಅಧಿಕಾರಿ ಎಂದು ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನ, ಸುಳ್ಯ, ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿ ಕರ್ತವ್ಯ ನಿವಹಿಸುತ್ತಿದ್ದಾಗ ಕರ್ತವ್ಯ ಲೋಪ ಎಸಗಿರುವರೆಂದು ಈ ಕೆಳಕಂಡ ಆರೋಪದ ಮೇಲೆ ಸರ್ಕಾರವು ಸದರಿ ಅಧಿಕಾರಿಯ ವಿರುದ್ದ ಶಿಸ್ತಿನ ಕ್ರಮ ಕೈಗೊಳ್ಳುವ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 1೮ ಮೇರೆಗೆ ದೋಷರೋಪಣಾ ಪಟ್ಟಿಯನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ: 16.09.2003 ರ ತಿಳುವಳಿಕೆ ಪತ್ರದ ಮೇರೆಗೆ ಜಾರಿ ಮಾಡಲಾಗಿತ್ತು:–

(1) ಫಸಲಿ 1411ರಲ್ಲಿ ಕುಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಾಲಯಕ್ಕೆ ಸೇರಿದ ಚಿನ್ನ, ಬೆಳ್ಳಿ ಅಂಗಡಿಯ ಟೆಂಡರ್‌ದಾರರಾದ ಶ್ರೀ ಹರೀಶ್. ಎಸ್. ರವರಿಂದ ಬಡ್ಡಿ ಸೇರಿ ರೂ. 7,75,241/– ಹಾಗೂ ಆದಿ ಸುಬ್ರಹ್ಮಣ್ಯ ದೇವಸ್ಥಾನದ ಹಣ್ಣುಕಾಯಿ ಅಂಗಡಿ ಟೆಂಡರ್‌ದಾರರಾದ ಶ್ರೀ ಬಿ.ಎಸ್. ದಿನೇಶ್ ಅವರಿಂದ ಬಡ್ಡಿ ಸೇರಿ ರೂ. 8.13.257/– ಗಳನ್ನು ವಸೂಲಿ ಮಾಡದೆ ಕರ್ತವ್ಯ ವಿಮುಖತೆಯಿಂದ ದೇವಸ್ಥಾನಕ್ಕೆ ನಷ್ಠ ಉಂಟಾಗಲು ಕಾರಣರಾಗಿರುವುದು;

(2) ಕುಕ್ಕೆ ಶ್ರೀ ಸುಬ್ರಹ್ಮಣ್ಯ ಸ್ವಾಮಿ ದೇವಸ್ಥಾನ, ಸುಬ್ರಹ್ಮಣ್ಯ, ಸುಳ್ಯ, ತಾಲ್ಲೂಕು ಈ ದೇವಾಲಯಕ್ಕೆ ಸೇರಿದ ಸರ್ವೆ ನಂ.61/2 ರಲ್ಲಿರುವ ಮನೆಯ ನಂಬರ್ 2/332 ರಲ್ಲಿ ಅನಧಿಕೃತವಾಗಿ ವಾಸ್ತವ್ಯವಿದ್ದ ಶ್ರೀ ವಿಶ್ವನಾಥ್ ಆಚಾರ್ಯರವರನ್ನು ಖಾಲಿ ಮಾಡಿಸಲು ಕೋರಿ ಸುಳ್ಯ, ಸಿವಿಲ್ ಜಡ್ಜ್‌ರ ನ್ಯಾಯಾಲಯದಲ್ಲಿ ಸಲ್ಲಿಸಿದ ಪ್ರಕರಣ ಎಸ್.ಸಿ.ನಂ:1:83 ರಲ್ಲಿನ ತೀರ್ಪಿನಂತೆ ಕೋರ್ಟ್ ಅಮೀನರ ಸಮ್ಮುಖದಲ್ಲಿ ಸದರಿ ಮನೆ ಸ್ವಾಧೀನತೆಗೆ ಬಂದಿರುವುದಾಗಿ ದಿನಾಂಕ:28.11.2001 ರಂದು ನ್ಯಾಯಾಲಯಕ್ಕೆ ಡೆಲಿವರಿ ರಶೀದಿ ಬರೆದುಕೊಟ್ಟಿದ್ದರೂ, ಸದರಿ ಕಟ್ಟಡವನ್ನು ದೇವಾಲಯದ ವಶಕ್ಕೆ ತೆಗೆದುಕೊಳ್ಳದೆ ಬಾಡಿಗೆದಾರರಿಗೆ ವಾಸಿಸಲು ಅನುವು ಮಾಡಿಕೊಟ್ಟು, ಕರ್ತವ್ಯ ಲೋಪ ಎಸಗಿದ್ದಲ್ಲದೆ ದೇವಾಲಯದ ಹಿತಕ್ಕೆ ವಿರುದ್ಧವಾಗಿ ವರ್ತಿಸಿ ಸರ್ಕಾರಿ ಅಧಿಕಾರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುವುದು.

ಸದರಿ ತಿಳುವಳಿಕೆ ಪತ್ರಕ್ಕೆ ಆಪಾದಿತ ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ತಮ್ಮ ಲಿಖಿತ ಸಮಜಾಯಿಷಿಯನ್ನು ನೀಡಿ ತಮ್ಮ ಮೇಲಿನ ಆಪಾದನೆಗಳನ್ನು ಅಲ್ಲಿಗಳೆದಿರುತ್ತಾರೆ. ಆದ್ದರಿಂದ ಆರೋಪಗಳ ಸತ್ಯಾಸತ್ಯತೆಯನ್ನು ಅರೆಯುವ ಸಲುವಾಗಿ ವಿವರವಾದ ಇಲಾಖಾ ವಿಚಾರಣೆ ನಡೆಸಲು ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರನ್ನು ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ವಿವರವಾದ ಇಲಾಖಾ ವಿಚಾರಣೆ ಕೈಗೊಂಡು ಮೇಲೆ (4) ರಲ್ಲಿ ಓದಲಾದಂತೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ಆರೋಪಿತರ ವಿರುದ್ಧದ 2 ಆರೋಪಗಳು ಸಾಬೀತಾಗಿರುವುದಾಗಿ ನಿರ್ಣಯಿಸಿರುತ್ತಾರೆ.

ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ವಯ ಆಪಾದಿತ ಅಧಿಕಾರಿಗೆ ಮೇಲೆ (5) ರಲ್ಲಿ ಓದಲಾದಂತೆ 2 ನೇ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿ ಮಾಡಿ ವಿಚಾರಣಾಧಿಕಾರಿಯವರ ವರದಿ ಬಗ್ಗೆ ತಮ್ಮ ಲಿಖಿತ ಸಮಜಾಯಿಸಿಯನ್ನು ನೀಡುವಂತೆ ಕೋರಲಾಗಿತ್ತು.

ಆಪಾದಿತ ಅಧಿಕಾರಿಯು ಸರ್ಕಾರವು ಜಾರಿ ಮಾಡಿರುವ 2ನೇ ಕಾರಣ ಕೇಳುವ ನೋಟೀಸಿಗೆ ತಮ್ಮ ಲಿಖಿತ ಸಮಜಾಯಿಷಿಯನ್ನು ಮೇಲೆ (6) ರಲ್ಲಿ ಓದಲಾದ ಪತ್ರದಲ್ಲಿ ನೀಡುತ್ತಾ, ತಮ್ಮನ್ನು ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಶಿಸ್ತು ಪ್ರಾಧಿಕಾರವಾದ ಸರ್ಕಾರವು ವಿಚಾರಣಾ ವರದಿಯನ್ನು ಆಪಾದಿತ ನೌಕರರ ಲಿಖಿತ ಹೇಳಿಕೆ ಮತ್ತು ದಾಖಲೆಗಳನ್ನು ಪರಿಶೀಲಿಸಲಾಗಿ, ಆರೋಪಿತರು ಎಸಗಿರುವ ಕರ್ತವ್ಯ ಲೋಪಗಳು ಆಡಳಿತಾತ್ಮಕ ಲೋಪಗಳಾಗಿದ್ದು, ಅವು ಯಾವುದೇ ದುರುದ್ದೇಶದಿಂದ ಕೂಡಿರುವುದಿಲ್ಲವೆಂದು ಕಂಡುಬರುತ್ತದೆಯಾದ್ದರಿಂದ ಹಾಗೂ ಸದರಿ ಆರೋಪಗಳಿಗೆ

ಅವರೊಬ್ಬರನ್ನೇ ಆರೋಪಿತರನ್ನಾಗಿಸುವುದು ಸೂಕ್ತವಾಗುವುದಿಲ್ಲ ಎಂದು ಕಂಡು ಬರುವುದರಿಂದ, ಆದಾಗ್ಯೂ ಆರೋಪಿತರು ಎಸಗಿರುವ ಆಡಳಿತಾತ್ಮಕ ಲೋಪಕ್ಕೆ ಮತ್ತು ಅದರ ಗಂಭೀರತೆಗೆ ಅನುಗುಣವಾಗಿ ಸದರಿಯವರ ನಿವೃತ್ತಿ ವೇತನದ ಶೇ. 10ರಷ್ಟನ್ನು 2 ವರ್ಷಗಳ ಅವಧಿಯವರೆಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿರುತ್ತದೆ.

ಆರೋಪಿತರಿಗೆ ದಂಡನೆ ವಿಧಿಸಲು ತೀರ್ಮಾನಿಸಿರುವ ಸರ್ಕಾರದ ಸದರಿ ಪ್ರಸ್ತಾವನೆಗೆ ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ (7) ರಲ್ಲಿ ಓದಲಾದ ಪತ್ರದಲ್ಲಿ ಸಹಮತಿ ನೀಡಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 159 ಮುಸೇವಿ 2003, ಬೆಂಗಳೂರು, ದಿನಾಂಕ: 11ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಎಂ.ಎಸ್. ವೆಂಕಟೇಶ ಮೂರ್ತಿ, ನಿವೃತ್ತ ಗ್ರೂಪ್–ಎ ಅಧಿಕಾರಿ ಇವರು ಎಸಗಿರುವ ಆಡಳಿತಾತ್ಮಕ ಕರ್ತವ್ಯ ಲೋಪಕ್ಕೆ ಮತ್ತು ಅದರ ಗಂಭೀರತೆಗೆ ಅನುಗುಣವಾಗಿ ಕರ್ನಾಟಕ ಸರ್ಕಾರಿ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 (1) (ಎ) ರನ್ವಯ ಸದರಿಯವರ ನಿವೃತ್ತಿ ವೇತನದ ಶೇ. 10 ರಷ್ಟನ್ನು 2 ವರ್ಷಗಳ ಅವಧಿಯವರೆಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿದೆ.

ಸದರಿ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 145 ಸಿಎಸ್‌ಎನ್ 2008 ದಿನಾಂಕ:30.03.2009ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1292 **ಜಿ ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ)

**ವಿಷಯ:** ಶ್ರೀ ಜಿ. ಎನ್. ಬಸವರಾಜು ತಹಶೀಲ್ದಾರ್ ಕಾರವಾರ ಇವರ ವಿರುದ್ಧ ಇಲಾಖಾ ವಿಚಾರಣಾ ಕುರಿತು – ಆರೋಪದಿಂದ ಕೈಬಿಡುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪ್ರಸ್ತಾವನೆ: ಸಂ:ನಸ್ಥಸಂ: ಚುನಾವಣೆ.ವಿವ–34(6)/2007–08, ದಿನಾಂಕ:4–10–2007.
2) ಸರ್ಕಾರದ ಆದೇಶ ಸಂ: ಆರ್.ಡಿ.37 ಎಡಿಇ 2007, ದಿನಾಂಕ: 09.10.2007
3) ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ ಇವರ ಪತ್ರ ಸಂ: ಕಂಶಾ/ಸಿಬ್ಬಂದಿ(1)/ವಿವ–76/2007–08, ದಿನಾಂಕ:28–01–2008.
4) ಸರ್ಕಾರದ ಕಾರಣ ಕೇಳುವ ನೋಟೀಸ್ ದಿನಾಂಕ: 03–03–2008.
5) ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಇವರ ಅರೆ ಸರ್ಕಾರಿ ಪತ್ರ ಸಂ: ಕ್ರ ಪ್ರಾ ಆಬೆ: ಸಿಬ್ಬಂದಿ.1. ವಿವ:67:2007–08, ದಿನಾಂಕ:01–02–2008.
6) ಶ್ರೀ ಜಿ. ಎಸ್. ಬಸವರಾಜು, ಇವರ ಲಿಖಿತ ಸಮಜಾಯಿಷಿ ದಿನಾಂಕ: 12–03–2008.
7) ಸರ್ಕಾರದ ಆದೇಶ ಸಂ: ಆರ್‌ಡಿ 37 ಎಡಿಇ 2007, ದಿನಾಂಕ: 03–04–2008.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:4–10–2007ರ ಜಿಲ್ಲಾಧಿಕಾರಿಗಳು ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪ್ರಸ್ತಾವನೆಯಲ್ಲಿ ದಿನಾಂಕ:28–9–2007ರಂದು ನಗರಸಭೆ, ಕಾರವಾರ ವಾರ್ಡ್ ಸಂ:10, ಮತಗಟ್ಟೆ ಸಂಖ್ಯೆ:15ರ ಬಿಟ್ಟುಹೋದ ಮತದಾರರ ಪಟ್ಟಿಯಲ್ಲಿ ಮತದಾರರು ಹೆಸರುಗಳ ಪ್ರತ್ಯೇಕ ಪಟ್ಟಿಯನ್ನು ತಯಾರಿಸಿ ಮತದಾನ ನಡೆಯುತ್ತಿದ್ದಾಗಲೇ ಗುರುತು ಮಾಡಿದ ಮತದಾರರ ಪಟ್ಟಿಗೆ ಸೇರಿಸಿ ಚುನಾವಣಾ ನಿಯಮಗಳನ್ನು ಉಲ್ಲಂಘನೆ ಮಾಡಿರುವುದರಿಂದ ಶ್ರೀಮತಿ ಶುಭಲತಾಆಸ್ನೋಟಿಕರ ಹಾಗೂ ಅವರ ಮಗನಿಗೆ ಮತದಾನ ಮಾಡಲು ಅನುಕೂಲ ಮಾಡಿಕೊಡಲು ತಹಶೀಲ್ದಾರ್ ಕಾರವಾರ ಇವರು ಕಾರಣಕರ್ತರಾಗಿರುತ್ತಾರೆ. ಆದ್ದರಿಂದ ಚುನಾವಣಾ ನಿಯಮಗಳನ್ನು ಉಲ್ಲಂಘನೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಶ್ರೀ ಜಿ.ಎನ್. ಬಸವರಾಜು ತಹಶೀಲ್ದಾರ್, ಕಾರವಾರ ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮಗಳನ್ವಯ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಇಲಾಖಾ ವಿಚಾರಣೆ ಕೈಗೊಳ್ಳುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸರ್ಕಾರವು ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಜಿ.ಎನ್. ಬಸವರಾಜು, ತಹಶೀಲ್ದಾರ್, ಕಾರವಾರ ಇವರು ದಿನಾಂಕ:28–9–2007 ರಂದು ಜರುಗಿದ ನಗರ ಸ್ಥಳೀಯ ಸಂಸ್ಥೆಗಳ ಸಾರ್ವಜನಿಕ ಚುನಾವಣೆಯಲ್ಲಿ ನಗರಸಭೆ, ಕಾರವಾರ, ವಾರ್ಡ್ ನಂ:10, ಮತಗಟ್ಟೆ ಸಂಖ್ಯೆ:5ರ ಮತದಾರರ ಪಟ್ಟಿಯಲ್ಲಿ ಬಿಟ್ಟುಹೋದ ಮತದಾರರುಗಳ ಹೆಸರುಗಳ ಪ್ರತ್ಯೇಕ ಪಟ್ಟಿಯನ್ನು ತಯಾರಿಸಿ, ಗುರುತು ಮಾಡಿದ ಮತದಾರರ ಪಟ್ಟಿಗೆ ಸೇರಿಸಿ, ಚುನಾವಣಾ ನಿಯಮಗಳನ್ನು ಉಲ್ಲಂಘಿಸಿರುವುದು ಕರ್ನಾಟಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(i) (iii) ನ್ನು ಉಲ್ಲಂಘನೆ ಆಗಿರುತ್ತದೆ. ಆದುದರಿಂದ ಈ ಆಪಾದನೆಯು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 10(1)(ಡಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲೆ ಓದಲಾದ ಕ್ರ.ಸಂ.(2)ರ ದಿನಾಂಕ:09–10–2007ರಲ್ಲಿ ಇಲಾಖಾ ವಿಚಾರಣೆ ಕಾಯ್ದಿರಿಸಿ, ಸೇವೆಯಿಂದ ಆಮಾನತ್ತುಗೊಳಿಸಿ ಆದೇಶಿಸಲಾಗಿತ್ತು. ನಂತರ, ಜಿಲ್ಲಾಧಿಕಾರಿಗಳು ಮೇಲೆ ಓದಲಾದ ಕ್ರ.ಸಂ.(3)ರ ದಿನಾಂಕ: 28–01–2008 ರಲ್ಲಿ ಶ್ರೀ ಜಿ.ಎನ್. ಬಸವರಾಜು, ಹಿಂದಿನ ತಹಶೀಲ್ದಾರ್, ಕಾರವಾರ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಅನುಬಂಧ–1 ರಿಂದ 4 ವರೆಗಿನ ದೋಷಾರೋಪಣಾ ಪಟ್ಟಿಯನ್ನು ಹಾಗೂ ಸಂಬಂಧಪಟ್ಟ ದಾಖಲಾತಿಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಅದರಂತೆ, ಸರ್ಕಾರವು ಮೇಲೆ ಓದಲಾದ ಕ್ರ.ಸಂ.(4)ರ ದಿನಾಂಕ:12.03.2008ರಲ್ಲಿ ಸಿಸಿಎ ನಿಯಮಗಳಡಿಯಲ್ಲಿ ಶ್ರೀ ಜಿ.ಎನ್. ಬಸವರಾಜು, ಹಿಂದಿನ ತಹಶೀಲ್ದಾರ್, ಕಾರವಾರ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಶ್ರೀ ಜಿ.ಎನ್. ಬಸವರಾಜು, ತಹಶೀಲ್ದಾರ್ ಇವರು ಮೇಲೆ ಓದಲಾದ ಕ್ರ.ಸಂ.(6) ದಿನಾಂಕ: 12–03–2008 ರಲ್ಲಿ ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ, ತಮ್ಮ ವಿರುದ್ಧ ಹೂಡಲಾಗಿರುವ ಆಪಾದನೆಯನ್ನು ಅಲ್ಲಗೆಳೆದು, ತಮ್ಮ ವಿರುದ್ಧ ಹೂಡಲಾಗಿರುವ ಆಪಾದನೆಯಿಂದ ಕೈಬಿಡುವಂತೆ ಕೋರಿ ಅಗತ್ಯ ದಾಖಲಾತಿಗಳನ್ನು ಸಲ್ಲಿಸಿರುತ್ತಾರೆ. ಈ ಮಧ್ಯೆ ಮೇಲೆ ಓದಲಾದ ಕ್ರ.ಸಂ.(5)ರ ದಿನಾಂಕ: 01–02–2008ರ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ ಇವರು ಶ್ರೀ ಜಿ.ಎನ್. ಬಸವರಾಜು, ತಹಶೀಲ್ದಾರ್ ಇವರನ್ನು ಅಮಾನತ್ತಿನಿಂದ ಮುಕ್ತಗೊಳಿಸಿ, ಕಾರ್ಯ ನಿರ್ವಾಹಕವಲ್ಲದ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಸರ್ಕಾರವು ಶ್ರೀ ಜಿ.ಎನ್. ಬಸವರಾಜು ಇವರನ್ನು ಸೇವೆಗೆ ಪುನರ್‌ಸ್ಥಾಪಿಸುವ ಬಗ್ಗೆ ಪರಿಗಣಿಸಿ, ಅವರನ್ನು ಮೇಲೆ ಓದಲಾದ ಕ್ರ. ಸಂ. (7)ರ ದಿನಾಂಕ: 03–04–2008ರ ಆದೇಶದಲ್ಲಿ ಅವರ ವಿರುದ್ದ ಇಲಾಖಾ ವಿಚಾರಣೆ ಬಾಕಿಯಿಟ್ಟು, ಅಮಾನತ್ತಿನಿಂದ ಬಿಡುಗಡೆಗೊಳಿಸಿ, ವಿಶೇಷ ತಹಶೀಲ್ದಾರ್, ಕೆ.ಎಸ್.ಎಫ್.ಸಿ, ಬೆಂಗಳೂರು ಇಲ್ಲಿನ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಗೊಳಿಸಿ ಆದೇಶಿಸಲಾಗಿರುತ್ತದೆ.

ಶ್ರೀ ಜಿ.ಎನ್. ಬಸವರಾಜು, ಹಿಂದಿನ ತಹಶೀಲ್ದಾರ್, ಕಾರವಾರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಲಿಖಿತ ಸಮಜಾಯಿಷಿಯನ್ನು ಪರಿಶೀಲಿಸಿ, ಈ ಪ್ರಕರಣದಲ್ಲಿ ಪ್ರಿಸೈಡಿಂಗ್ ಆಫಿಸರ್ ಹಾಗೂ ಚುನಾವಣಾಧಿಕಾರಿಗಳು ತಿಳಿಸಿರುವಂತೆ ಅಂದಿನ ಚುನಾವಣಾ ಸಿಬ್ಬಂದಿಯೇ ಕಾರಣರೆಂದು ತಿಳಿಸಿರುವ ಹಿನ್ನೆಲೆಯಲ್ಲಿ, ಶ್ರೀ ಜಿ.ಎನ್. ಬಸವರಾಜು, ತಹಶೀಲ್ದಾರ್ ಇವರ ಲಿಖಿತ ಸಮಜಾಷಿಯನ್ನು ಒಪ್ಪಿ, ಅವರ ವಿರುದ್ದ ಹೂಡಲಾಗಿದ್ದ ಇಲಾಖಾ ವಿಚಾರಣೆಯಿಂದ ಕೈಬಿಡಲು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 37 ಎಡಿಇ 2007, ಬೆಂಗಳೂರು ದಿನಾಂಕ: 16ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಜಿ.ಎನ್. ಬಸವರಾಜು, ಹಿಂದಿನ ತಹಶೀಲ್ದಾರ್, ಕಾರವಾರ, ಪ್ರಸ್ತುತ ವಿಶೇಷ ತಹಶೀಲ್ದಾರ್, ಕೆಎಸ್‌ಎಫ್‌ಸಿ, ಬೀದರ್ ಇವರ ವಿರುದ್ಧ ಹೊರಿಸಲಾಗಿದ್ದ ಆಪಾದನೆಯ ಕುರಿತು ಸಲ್ಲಿಸಲಾಗಿದ್ದ ಲಿಖಿತ ಸಮಜಾಯಿಷಿಯನ್ನು ಒಪ್ಪಿ, ಇವರ ವಿರುದ್ಧ ಹೂಡಲಾಗಿದ್ದ ಇಲಾಖಾ ವಿಚಾರಣೆಯಿಂದ ಈ ಪ್ರಕರಣದ ಮಟ್ಟಿಗೆ ಕೈಬಿಟ್ಟು ಆದೇಶಿಸಿದೆ. ಹಾಗೂ ಇವರು ಆಮಾನತ್ತಿನಲ್ಲಿ ಕಳೆದ ದಿನಾಂಕ:09–10–2007 ರಿಂದ 03–04–2008 ರವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 100(1) (ಬಿ)ರ ಪ್ರಕಾರ ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1293

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಪಿ. ಸುಬ್ಬಾ ಹಿಂದಿನ ತಹಶೀಲ್ದಾರ್, ಹುಣಸೂರು ತಾಲ್ಲೂಕು ಪ್ರಸ್ತುತ ನಿವೃತ್ತರು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂ: ಆರ್‌ಡಿ49 ಎಡಿಇ 2005 (ಭಾಗ–1), ದಿನಾಂಕ: 5–3–2007.
2) ಶ್ರೀ ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರ ಮನವಿ ದಿನಾಂಕ:15–3–2007.
3) ಸರ್ಕಾರದ ಆದೇಶ ಸಂ: ಆರ್‌ಡಿ 49 ಎಡಿಇ 2005 (ಭಾಗ–1), ದಿನಾಂಕ: 09–04–2007.
4) ವಿಚಾರಣಾಧಿಕಾರಿಗಳ ವರದಿ ದಿನಾಂಕ :30–01–2008
5) ಸರ್ಕಾರದ ಎರಡನೇ ಕಾರಣ ಕೇಳುವ ನೋಟೀಸ್ ದಿನಾಂಕ: 17–06–2008.
6) ಶ್ರೀ ಪಿ. ಸುಬ್ಬಾ, ನಿವೃತ್ತ ತಹಶೀಲ್ದಾರ್ ಇವರ ಲಿಖಿತ ಸಮಜಾಯಿಷಿ ದಿನಾಂಕ: 09–08–2008.
7) ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂ: ಪಿಎಸ್‌ಡಿ 143 ಸಿಎನ್‌ಎಸ್08, ದಿನಾಂಕ:01–04–2009.

**ಪ್ರಸ್ತಾವನೆ:**

ಶ್ರೀ ಪಿ. ಸುಬ್ಬಾ, ತಹಶೀಲ್ದಾರ್, ಕೊಳ್ಳೇಗಾಲ ತಾಲ್ಲೂಕು ಇವರು ಹಿಂದೆ ಹುಣಸೂರು ತಾಲ್ಲೂಕಿನಲ್ಲಿ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಹುಣಸೂರು ತಾಲ್ಲೂಕು ಕಛೇರಿಯ ಪಿ.ಡಿ.ಅಕೌಂಟ್‌ನಿಂದ 2005ರ ಮಾರ್ಚ್ ಮಾಹೆಯಲ್ಲಿ ರೂ 3.00 ಲಕ್ಷಗಳ ಮೊಬಲಗನ್ನು ಮೇಲಾಧಿಕಾರಿಗಳ ಆದೇಶವಿಲ್ಲದೆ ನಗದೀಕರಿಸಿದ್ದು, ಮತ್ತು ಇದೇ ಅವಧಿಯಲ್ಲಿ ಉಪ ವಿಭಾಗಾಧಿಕಾರಿ ಹಾಗೂ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆಯದೇ 1961ರ ಕರ್ನಾಟಕ ಭೂ ಸುಧಾರಣಾ ಕಾಯ್ದೆ ಕಲಂ 79 (ಎ) ಮತ್ತು 79 (ಬಿ) ಅನ್ನು ಉಲ್ಲಂಘಿಸಿ ತಮ್ಮ ಪತ್ನಿ ಶ್ರೀಮತಿ ರತ್ನಮ್ಮ ಬಿನ್ ಕುಟ್ಟಪ್ಪನ್, ಮಗಳು ಸಂಧ್ಯಾ ಕೋಂ ಸುರೇಶ, ನಾದಿನಿ ಪ್ರೇಮ ಕೋಂ ತಿಪ್ಪೇಸ್ವಾಮಿ, ಬಾವಮೈದ ಬಾಲಕೃಷ್ಣ ಬಿನ್ ಕುಟ್ಟಪ್ಪನ್ ಇವರುಗಳಿಗೆ ಕೃಷಿ ಕಾರ್ಮಿಕ ದೃಢೀಕರಣ ಪತ್ರಗಳನ್ನು ಸೃಷ್ಟಿಸಿ, ಇವರುಗಳ ಹೆಸರುಗಳಲ್ಲಿ ಹುಣಸೂರು ತಾಲ್ಲೂಕು ಕಿರಜಾಜಿ ಗ್ರಾಮದ ಸ.ನಂ. 101 ರಲ್ಲಿ 11 ಎಕರೆ 0.09 ಗುಂಟೆ ಜಮೀನನ್ನು 5,92,000/– ರೂಗಳಿಗೆ ಅಕ್ರಮವಾಗಿ ಖರೀದಿಸಲು ಅವಕಾಶವನ್ನು ಕಲ್ಪಿಸಿಕೊಟ್ಟಿರುತ್ತಾರೆಂದು ಹಾಗೂ ಶ್ರೀಯುತರು ಈ ಹಿಂದೆ ಹುಣಸೂರು ತಾಲ್ಲೂಕಿನಲ್ಲಿ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಹುಣಸೂರು ತಾಲ್ಲೂಕು ಕಿರಜಾಜಿ ಗ್ರಾಮ ಸ.ನಂ. 101 ರಲ್ಲಿ 11 ಎಕರೆ 0.09 ಗುಂಟೆ ಜಮೀನನ್ನು ತಮ್ಮ ಪತ್ನಿ ರತ್ನಮ್ಮ ಬಿನ್ ಕುಟ್ಟಪ್ಪನ್ ಮಗಳು ಸಂಧ್ಯಾ ಕೋಂ ಸುರೇಶ್, ನಾದಿನಿ ಪ್ರೇಮ ಕೋಂ ತಿಪ್ಪೇಸ್ವಾಮಿ, ಭಾವಮೈದ ಬಾಲಕೃಷ್ಣ ಬಿನ್ ಕುಟ್ಟಪ್ಪನ್ ಇವರುಗಳ ಹೆಸರಿನಲ್ಲಿ ದಿನಾಂಕ: 7–4–2005 ರಂದು ಖರೀದಿ ಮಾಡಿದ ನಂತರ ಹುಣಸೂರು ಉಪನೊಂದಣಾಧಿಕಾರಿಗಳಿಂದ ದಿನಾಂಕ: 3–5–2005 ರಂದು ಸ್ವೀಕೃತವಾದ "ಜೆ ಮ್ಯೂಟೇಷನ್‌ಗಳ ಸಂಬಂಧವಾಗಿ ದಿನಾಂಕ:4–5–2005 ರಂದು ಅಧಿಕೃತ ಜ್ಞಾಪನ ಹೊರಡಿಸಿ, ಹುಣಸೂರು ತಾಲ್ಲೂಕು ಕಿರಜಾಜಿ ಗ್ರಾಮದ ಸ.ನಂ. 101 ರಲ್ಲಿ 11 ಎಕರೆ .09 ಗುಂಟೆ ಜಮೀನು 1961ರ ಕರ್ನಾಟಕ ಭೂ ಸುಧಾರಣೆ ಕಾಯಿದೆ ಕಲಂ 79 (ಎ) ಮತ್ತು (ಬಿ) ಯನ್ನು ಉಲ್ಲಂಘನೆಯಾಗಿಲ್ಲವೆಂದೂ ಕಿರಿಜಾಜಿ ಜಮೀನಿನ ವ್ಯಾಪ್ತಿಯಲ್ಲಿ ಬರುವ ಕಸಬಾ ಹೋಬಳಿ ರಾಜಸ್ವ ನಿರೀಕ್ಷಕರಿಗೆ ಸೂಚನೆ ನೀಡಿ, ರಾಜಸ್ವ ನಿರೀಕ್ಷಕರಿಂದ ದಿನಾಂಕ: 4–5–2005 ರಂದೇ ಖರೀದಿದಾರರ ಹೆಸರಿಗೆ ಖಾತೆ ಬದಲಾವಣೆ ಆದೇಶ ಹೊರಡಿಸಿ ಸಂಬಂಧಪಟ್ಟ ಜಮೀನಿನ ಆರ್‌ಟಿಸಿಯಲ್ಲಿ ಖರೀದಿದಾರರಾದ, ತಮ್ಮ ಪತ್ನಿ ರತ್ನಮ್ಮ ಬಿನ್ ಕುಟ್ಟಪ್ಪನ್, ಮಗಳು ಸಂಧ್ಯಾ ಕೋಂ ಸುರೇಶ, ನಾದಿನಿ ಪ್ರೇಮ ಕೋಂ ತಿಪ್ಪೇಸ್ವಾಮಿ, ಬಾಮೈದ ಬಾಲಕೃಷ್ಣ ಬಿನ್ ಕುಟ್ಟಪ್ಪನ್ ಇವರುಗಳ ಹೆಸರಿನಲ್ಲಿ ಆರ್‌ಟಿಸಿ ಇಂಡೀಕರಣ ಮಾಡಿಸಿ, ಕರ್ತವ್ಯಲೋಪವೆಸಗಿ 1966ರ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿಗಳ ನಿಯಮ 3(i) (ii) (iii) ಅನ್ನು ಉಲ್ಲಂಘಿಸಿರುತ್ತಾರೆ ಎಂಬ ಆರೋಪಗಳ ಮೇಲೆ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಓದಲಾದ ಕ್ರ.ಸಂ.(1)ರ ದಿನಾಂಕ:5–3–2007ರ ಆದೇಶದಲ್ಲಿ ಶ್ರೀ ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದನ್ನು ಬದಲಾವಣೆ ಮಾಡಿ, ಮೇಲೆ ಓದಲಾದ ಕ್ರ.ಸಂ.(3)ರ ದಿನಾಂಕ: 09–04.2007 ರಲ್ಲಿ ಶ್ರೀ ಕೆ.ಎನ್. ನಾಗೇಂದ್ರಕುಮಾರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ: 33ನೇ ಮನೆ, 16ನೇ ಅಡ್ಡರಸ್ತೆ, 6ನೇ ಹಂತ, ಜೆ.ಪಿ.ನಗರ, ಬೆಂಗಳೂರು–560 078 ಇವರನ್ನು ಈ ಪ್ರಕರಣದ ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಮೈಸೂರು ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ.(4)ರ ದಿನಾಂಕ: 30–01–2008ರಲ್ಲಿ ಶ್ರೀ ಕೆ.ಎನ್. ನಾಗೇಂದ್ರಕುಮಾರ್, ವಿಚಾರಣಾಧಿಕಾರಿಗಳು ಈ ಪ್ರಕರಣದ ಕುರಿತು ವಿಚಾರಣೆ ನಡೆಸಿ, ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಅದರಂತೆ, ವಿಚಾರಣಾ ವರದಿಯಲ್ಲಿ ಶ್ರೀ ಪಿ.ಸುಬ್ಬಾ ಇವರ ವಿರುದ್ಧದ ಆರೋಪಗಳ ಕುರಿತು ಈ ಕೆಳಕಂಡಂತೆ ನಿರ್ಣಯಿಸಿರುತ್ತಾರೆ.

**ಆರೋಪ : 1–ಸಾಬೀತಾಗಿರುವುದಿಲ್ಲ.**
**ಆರೋಪ : 2–ಸಾಬೀತಾಗಿರುತ್ತದೆ.**
**ಆರೋಪ : 3–ಸಾಬೀತಾಗಿರುತ್ತದೆ.**

ಸದರಿ ವಿಚಾರಣಾ ವರದಿಯನ್ವಯ, ಶ್ರೀ ಪಿ. ಸುಬ್ಬಾ, ನಿವೃತ್ತ ತಹಶೀಲ್ದಾರ್ ಇವರಿಗೆ ಮೇಲೆ ಓದಲಾದ ಕ್ರ. ಸಂ. (5)ರ ದಿನಾಂಕ: 17–06–2008 ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಈ ನೋಟೀಸಿಗೆ ಶ್ರೀಯುತರು ಮೇಲೆ ಓದಲಾದ ಕ್ರ. ಸಂ. (6)ರ ದಿನಾಂಕ: 09–08–2008ರಂದು ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ, ಸಾಮಾನ್ಯವಾಗಿ ಕೃಷಿಕರು ತಮ್ಮ ಜಮೀನುಗಳಲ್ಲಿ ವ್ಯವಸಾಯದ ಕಾಲದಲ್ಲಿ ಕೃಷಿ ಕಾರ್ಮಿಕರಾಗಿ ಕೆಲಸ ಮಾಡುತ್ತಾರೆ. ಇದು ಇಡೀ ರಾಜ್ಯದಲ್ಲಿರುವ ಪದ್ಧತಿ. ಇದನ್ನು ನಾನು ಮಾನ್ಯ ವಿಚಾರಣಾಧಿಕಾರಿಯವರಿಗೆ ಮೌಖಿಕವಾಗಿ ಹಾಗೂ ನನ್ನ ಲಿಖಿತ ವಾದದಲ್ಲಿ ನಿವೇದಿಸಿರುತ್ತೇನೆ. ಆದರೆ ಮಾನ್ಯ ವಿಚಾರಣಾಧಿಕಾರಿಯವರು ಇಡೀ ರಾಜ್ಯದಲ್ಲಿ ರೂಢಿಯಲ್ಲಿರುವ ಪದ್ಧತಿಯನ್ನು ಗಣನೆಗೆ ತೆಗೆದುಕೊಂಡಿರುವುದಿಲ್ಲದಿರುವುದು ದುರದೃಷ್ಟಕರ. ನಾನು ಕೃಷಿ ಕಾರ್ಮಿಕರ ದೃಢೀಕರಣಗಳನ್ನು ನೀಡದಿದ್ದರೂ ಖರೀದಿದಾರರುಗಳು ಕೃಷಿ ಜಮೀನನ್ನು ಖರೀದಿಸಲು ಅರ್ಹರಾಗಿರುತ್ತಾರೆ. ಭೂ ಸುಧಾರಣೆ ಕಾಯಿದೆಯ ನಿಯಮ 79(ಎ) ಮತ್ತು 79(ಬಿ) ಈ ಖರೀದಿದಾರರುಗಳಿಗೆ ಅನ್ವಯಿಸುವುದಿಲ್ಲ ಹಾಗೂ ಕೃಷಿ ಕಾರ್ಮಿಕರ ದೃಢೀಕರಣ ನೀಡಿ ನಾನು ಯಾವ

ನಿಯಮವನ್ನೂ ಉಲ್ಲಂಘಿಸಿರುವುದಿಲ್ಲ ಮತ್ತು ಕರ್ತವ್ಯ ಲೋಪವನ್ನು ಎಸಗಿರುವುದಿಲ್ಲ ಎಂದು ನಿವೇದಿಸುತ್ತೇನೆ. ಭೂ ಸುಧಾರಣೆ ಕಾಯ್ದೆಯಲ್ಲಿ ಕೃಷಿ ಜಮೀನನ್ನು ಖರೀದಿಸುವ ವ್ಯಕ್ತಿ ಜಮೀನು ಇರುವ ಗ್ರಾಮದಲ್ಲಿಯೇ ವಾಸ ಇರಬೇಕೆಂದು ಎಲ್ಲೂ ಇರುವುದಿಲ್ಲ. ನಿಯಮದಲ್ಲಿ ಇಲ್ಲದಿರುವುದನ್ನು ಸ್ವಂತ ಅಭಿಪ್ರಾಯದಂತೆ ಅರ್ಥೈಸುವುದು ಸರಿಯಲ್ಲ ಎಂದು ನಿವೇಧಿಸುತ್ತೇನೆ. ಖರೀದಿದಾರರೆಲ್ಲರೂ ತಮ್ಮಗಳ ಜಮೀನುಗಳು ಬೇರೆ ಬೇರೆ ಜಿಲ್ಲೆಯಲ್ಲಿ ಇರುತ್ತೆ ಅದರ ವ್ಯವಸಾಯ ಮುಗಿದ ನಂತರ ಕೃಷಿ ಕಾರ್ಮಿಕರಾಗಿ ದುಡಿಯುವುದರ ಬದಲು ಎಲ್ಲರೂ ಒಂದೇ ಜಾಗದಲ್ಲಿದ್ದು ಕೋ–ಆಪರೇಟೀವ್ ಫಾರ್ಮಿಂಗ್ ಮಾಡಲು ಉದ್ದೇಶಿಸಿ ಕಿರುಜಾಜಿ ಗ್ರಾಮದಲ್ಲಿ ಜಮೀನನ್ನು ಖರೀದಿಸಿರುತ್ತಾರೆ. ಈ ಸಂಗತಿಯನ್ನು ಮಾನ್ಯ ವಿಚಾರಣಾಧಿಕಾರಿಯವರು ವರದಿಯಲ್ಲಿ ತಿಳಿಸಿರುತ್ತಾರೆ. ಆದರೆ ಆ ಬಗ್ಗೆ ಅವರ ಅಭಿಪ್ರಾಯವನ್ನು ನೀಡಿರುವುದಿಲ್ಲ. ಮಾನ್ಯ ಉಪವಿಭಾಗಾಧಿಕಾರಿಯವರು ಈ 4 ಜನ ಖರೀದಿಸಿರುವ ಜಮೀನನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ಆದೇಶಕ್ಕೆ ಕೆ.ಎ.ಟಿ ತಡೆಯಾಜ್ಞೆ ನೀಡಿರುತ್ತೆ. ಖರೀದಿದಾರರು ಜಮೀನಿನ ಸ್ವಾಧಿನಾನುಭವದಲ್ಲಿ ಇರುತ್ತಾರೆ". ಆದುದರಿಂದ ಈ ಆರೋಪದಿಂದ ದೋಷಮುಕ್ತರನ್ನಾಗಿ ಮಾಡುವಂತೆ ಕೋರಿರುತ್ತಾರೆ.

ಸದರಿಯವರ ಲಿಖಿತ ಸಮಜಾಯಿಷಿಯನ್ನು ಸರ್ಕಾರವು ವಿಚಾರಣಾ ವರದಿ ಹಾಗೂ ಆಪಾದಿತ ನಿವೃತ್ತ ಅಧಿಕಾರಿಯ ಉತ್ತರವನ್ನು ಪರಿಶೀಲಿಸಲಾಗಿ ಆಪಾದಿತ ಅಧಿಕಾರಿಯು ತನ್ನ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ತನ್ನ ಪತ್ನಿ, ಮಗಳು ಹಾಗೂ ಭಾವಮೈದುನನಿಗೆ ಜಮೀನುಗಳನ್ನು ಖರೀದಿಸುವ ಸಲುವಾಗಿ ಕರ್ನಾಟಕ ಭೂ ಸುಧಾರಣೆ ಕಾಯಿದೆ ಉಲ್ಲಂಘನೆಯಾಗದಂತೆ ಮಾಡಲು ಕೃಷಿ ಕಾರ್ಮಿಕರ ದೃಢೀಕರಣ ಪತ್ರಗಳನ್ನು ಖರೀದಿದಾರರು ಕೃಷಿ ಕಾರ್ಮಿಕರು ಅಲ್ಲದಿದ್ದರೂ ಅಕ್ರಮವಾಗಿ ಜಮೀನು ಖರೀದಿಸಲು ಅವಕಾಶ ಮಾಡಿಕೊಟ್ಟಿರುವುದು ವಿಚಾರಣೆಯಲ್ಲಿ ಸಾಕ್ಷಿ ಹಾಗೂ ದಾಖಲೆಗಳ ಸಮೇತ ಸಾಬೀತಾಗಿರುತ್ತದೆ. ಆದ್ದರಿಂದ ಪ್ರಕರಣದ ಕುರಿತು ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಹಾಗೂ ಉದ್ದೇಶಿತ ಶ್ರೀ ಪಿ.ಸುಬ್ಬಾ, ಇವರ ನಿವೃತ್ತಿ ವೇತನದಿಂದ ಶೇಕಡಾ 50 ರಷ್ಟನ್ನು ಕಡಿತಗೊಳಿಸುವ ದಂಡನೆಗೆ ಕರ್ನಾಟಕ ಲೋಕ ಸೇವಾ ಆಯೋಗದಿಂದ ಸಮಾಲೋಚಿಸಲಾಗಿ ಮೇಲೆ (7)ರ ದಿನಾಂಕ:01–04–2009 ರಲ್ಲಿ ಓದಲಾದ ಪತ್ರದಲ್ಲಿ ಆಯೋಗದ ಸಹಮತಿಯನ್ನು ಪಡೆಯಲಾಗಿದೆ. ಆದ್ದರಿಂದ ಶ್ರೀ ಪಿ. ಸುಬ್ಬಾ, ನಿವೃತ್ತ ತಹಶೀಲ್ದಾರ್ ಸಾಬೀತಾಗಿರುವ ಆರೋಪಗಳ ಕುರಿತು ದಂಡನೆ ವಿಧಿಸಲು ತೀರ್ಮಾನಿಸಲಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 49 ಎಡಿಇ 2005 (ಭಾಗ–1), ದಿನಾಂಕ: 15ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದ ಕುರಿತು, ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸರ್ಕಾರವು ಒಪ್ಪಿ, ಶ್ರೀ ಪಿ. ಸುಬ್ಬಾ. ಹಿಂದಿನ ತಹಶೀಲ್ದಾರ್, ಹುಣಸೂರು, ಪ್ರಸ್ತುತ ನಿವೃತ್ತರು ಇವರ ವಿರುದ್ಧ ಸಾಬೀತಾಗಿರುವ ಆರೋಪಗಳ ಕುರಿತು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಅವರ ಪಿಂಚಣಿಯಿಂದ ಶೇಕಡ 50 ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1294 **ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ಸರ್ಕಾರದ ಆದೇಶ ಸಂಖ್ಯೆ ಕಂಇ 17 ಭೂದಾಸೇ (1) 2009, ಬೆಂಗಳೂರು, ದಿನಾಂಕ: 18ನೇ ಮೇ 2009**

**ವಿಷಯ:** ಶ್ರೀ ಮಲ್ಲಿಕಾರ್ಜುನಯ್ಯ, ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ,

ಶ್ರೀ ಮಲ್ಲಿಕಾರ್ಜುನಯ್ಯ, ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾರವರು ಈ ಹಿಂದೆ ಜಿಲ್ಲಾಧಿಕಾರಿಗಳ ಕಛೇರಿ ಮಂಡ್ಯ ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು ಆಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಸದರಿ ಕಛೇರಿಯಲ್ಲಿ ಎಸಗಿರುವ ಕರ್ತವ್ಯ ಲೋಪ ಮತ್ತು ಗುರುತರವಾದ ನ್ಯೂನತೆಗಳಿಗೆ ಆಸ್ಪದ ಮಾಡಿಕೊಟ್ಟಿರುವುದು ಮತ್ತು ನಡತೆ ನಿಯಮಗಳ ಉಲ್ಲಂಘನೆ ಮಾಡಿರುವುದು ಕಂಡು ಬಂದಿರುವುದರಿಂದಲೂ ಮತ್ತು ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ,

ಈ ಸಂಬಂಧ ಶ್ರೀ ಮಲ್ಲಿಕಾರ್ಜುನಯ್ಯ, ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ ರವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಹಾಗೂ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವುದು ಅವಶ್ಯವೆಂದು ಸರ್ಕಾರವು ತೀರ್ಮಾನಿಸಿದೆ.

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 10(1)(ಡಿ) ಮತ್ತು 10(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಮಲ್ಲಿಕಾರ್ಜುನಯ್ಯ, ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ ರವರ

ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಸೇವೆಯಿಂದ ಅಮಾನತ್ತಿನಲ್ಲಿರಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಮಲ್ಲಿಕಾರ್ಜುನಯ್ಯ ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 98ರ ನಿಯಮದನ್ವಯ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಈ ಅಧಿಕಾರಿಯ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಕಛೇರಿ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರ ಹುದ್ದೆಯ ಪ್ರಭಾರ ವ್ಯವಸ್ಥೆಯನ್ನು ಆಯುಕ್ತರು, ಭೂಮಾಪನ ಇಲಾಖೆ ರವರು ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1295

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ).

**ವಿಷಯ:** ಶ್ರೀ ಕೆ.ಎನ್. ನಾರಾಯಣಪ್ಪ, ಹಿಂದಿನ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹಾಲಿ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆಯಿಂದ ದೋಷಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಶ್ರೀ ಸೂರತ್ ಪ್ರಸಾದ್, ಅಧ್ಯಕ್ಷರು, ಗೋಲ್ಡ್ ಕಾಯಿನ್ಸ್ ಹೋಟೆಲ್ಸ್ ಮತ್ತು ರೆಸಾರ್ಟ್ಸ್ ಲಿಮಿಟೆಡ್, ರೆಸಿಡೆನ್ಸಿ ರಸ್ತೆ, ಬೆಂಗಳೂರು ಇವರ ದಿನಾಂಕ : 28–08–2003 ರ ದೂರು ಅರ್ಜಿ.
2) ದಿನಾಂಕ: 20–02–2004ರ ಕಾರಣ ಕೇಳುವ ನೋಟೀಸು ಸಂ: ಆರ್‌ಡಿ 18 ಎಡಿಇ 2004.
3) ಈ ಮೇಲ್ಕಂಡ ನೋಟೀಸಿಗೆ ಶ್ರೀ ಕೆ.ಎನ್. ನಾರಾಯಣಪ್ಪ ಇವರ ದಿನಾಂಕ:07–04–2004 ರ ಲಿಖಿತ ಉತ್ತರ.
4) ಸರ್ಕಾರದ ಆದೇಶ ಸಂ: ಆರ್‌ಡಿ 18 ಎಡಿಇ 2004, ದಿನಾಂಕ: 14–3–2005.
5) ವಿಚಾರಣಾಧಿಕಾರಿಗಳ ದಿನಾಂಕ:25.09.2008ರ ವಿಚಾರಣಾ ವರದಿ.
6) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂ: 3472/05 ದಿನಾಂಕ:31.07.2008.

**ಪ್ರಸ್ತಾವನೆ:**

ಶ್ರೀ ಕೆ.ಎನ್. ನಾರಾಯಣಪ್ಪ ಹಿಂದಿನ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹಾಲಿ ನಿವೃತ್ತರು ಇವರು ಸದರಿ ತಾಲ್ಲೂಕಿನ ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಬೆಂಗಳೂರು ನಗರ ರೆಡಿಸೆನ್ಸಿ ರಸ್ತೆಯಲ್ಲಿರುವ ಪ್ಲಾಟ್ ಸಂ: 50 ರಲ್ಲಿನ ಆಸ್ತಿ ಸಂ: 207, 208, 300, 300ಎ ಮತ್ತು 300ಬಿ ಇದರ ಒಟ್ಟು ವಿಸ್ತೀರ್ಣ 31,000 ಚದರಡಿಗಳಿದ್ದು, ಈ ಸ್ಥಳದಲ್ಲಿ ಚಾಚಿ ಹೋಟೆಲ್ ಎಂಬ ಸಂಸ್ಥೆಯನ್ನು ನಡೆಸುತ್ತಿರುವ ಶ್ರೀ ಚೇತನ್ ತಯಾಲ್ ಬಿನ್ ಲೇಟ್ ಎನ್.ಕೆ. ತಯಾಲ್ ಮತ್ತು ಶ್ರೀಮತಿ ಕುಸುಮ್ ತಯಾಲ್ ಕೋಂ ಚೇತನ್ ತಯಾಲ್ ಎಂಬುವವರು ಮಾಲೀಕರಾಗಿದ್ದು, ಶ್ರೀ ಎಂ.ವಿ. ಮಹಮ್ಮದ್ ನಿಸಾರ ಮತ್ತು ಶ್ರೀ ಚತುರ್ಭಜ ಎಂಬುವವರು ಸ್ಥಳೀಯ ಪೊಲೀಸ್ ಅಧಿಕಾರಿಗಳ ಜೊತೆ ಶಾಮೀಲಾಗಿ ಸದರಿ ಕಟ್ಟಡಗಳಲ್ಲಿ ಚರಸ್ ಎಂಬ ಮಾದಕ ವಸ್ತು ಇರುವುದಾಗಿ ಹೋಟೆಲ್ ಮಾಲೀಕರ ವಿರುದ್ಧ ಆಶೋಕ್ ನಗರ ಪೊಲೀಸ್ ಠಾಣೆಯಲ್ಲಿ ಪ್ರಕರಣ ದಾಖಲು ಮಾಡಿ ಈ ಘಟನೆಯಿಂದಾಗಿ ಕಾನೂನು ಮತ್ತು ಸುವ್ಯವಸ್ಥೆ ಸಮಸ್ಯೆ ಉದ್ಭವಿಸಿದ್ದರಿಂದ ಸಿ.ಆರ್.ಪಿ.ಸಿ ಕಲಂ 145 ರಂತೆ ಕ್ರಮ ಕೈಗೊಳ್ಳಲು ಪ್ರಕರಣವನ್ನು ತಾಲ್ಲೂಕು ದಂಡಾಧಿಕಾರಿಗಳ ನ್ಯಾಯಾಲಯದಲ್ಲಿ ಹಾಜರುಪಡಿಸಿದಾಗ ಶ್ರೀ ಕೆ.ಎನ್. ನಾರಾಯಣಪ್ಪವರು ಈ ಪ್ರಕರಣದಲ್ಲಿನ ಪ್ರಾಥಮಿಕ ವಿಚಾರಣೆಯನ್ನು ಜರುಗಿಸಲು ಹೋಟೆಲ್ ಮಾಲೀಕರು ಹಾಗೂ ಈ ಪ್ರಕರಣ ಸಂ: ಎಂಎಜಿ (ಸಿಆರ್) 69/2001–02 ರಲ್ಲಿ ಪ್ರತಿವಾದಿ 1 ಮತ್ತು 2 ರಲ್ಲಿರುವ ಇವರಿಗೆ ತಮ್ಮ ಅಹವಾಲನ್ನು ಸಂಪೂರ್ಣವಾಗಿ ತಹಶೀಲ್ದಾರರ ಮುಂದೆ ನಡೆಯುತ್ತಿರುವ ಪ್ರಕರಣದಲ್ಲಿ ಮಂಡಿಸಲು ಸೂಕ್ತ ಸಮಯಾವಕಾಶ ನೀಡದೆ ಏಕಪಕ್ಷೀಯವಾಗಿ ಆತುರದ ಕ್ರಮ ವಹಿಸಿ ಗೊಂದಲ ಸೃಷ್ಟಿಸಿ, ವಾಸ್ತವವಾಗಿ ಯಾರು ಸದರಿ ಸ್ವತ್ತಿನ ಸ್ವಾಧೀನದಲ್ಲಿರುತ್ತಾರೆ ಎಂಬುದನ್ನು ತಿಳಿಯದೇ ಅಥವಾ ತಿಳಿದುಕೊಂಡು ಪ್ರಯತ್ನಿಸದೆ ತಪ್ಪು ನಿರ್ಧಾರ ಕೈಗೊಂಡು ವಾರಸುದಾರರಿಗೆ/ ಸ್ವಾಧೀನದಲ್ಲಿರುವವರಿಗೆ ನ್ಯಾಯ ಸಿಗದಂತೆ ಮಾಡಿರುವರೆಂದು ಮೇಲೆ ಕ್ರಮ ಸಂ. (1)ರಲ್ಲಿ ಓದಲಾದ ದೂರು ಅರ್ಜಿಯ ಬಗ್ಗೆ ಕಂದಾಯ ಇಲಾಖೆಯ ವಿಶೇಷ ಕೋಶವು ಪ್ರಾಥಮಿಕ ತನಿಖೆ ಜರುಗಿಸಿ ದೂರು ಅರ್ಜಿಯಲ್ಲಿನ ಅಂಶಗಳು ಸರಿಯೆಂದು ಮೇಲ್ನೋಟಕ್ಕೆ ಕಂಡು ಬರುತ್ತದೆಂದು ಅಭಿಪ್ರಾಯ ಪಟ್ಟು ಇಂತಹ ಕರ್ತವ್ಯ ಲೋಪದ ಬಗ್ಗೆ ಶ್ರೀ ಕೆ.ಎನ್. ನಾರಾಯಣಪ್ಪನವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಅಭಿಪ್ರಾಯ ಪಟ್ಟಿರುತ್ತದೆ.

ಸದರಿ ಅಧಿಕಾರಿಯ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ 1 ರಿಂದ 4 ವರೆಗೆ) ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಕೆ.ಎನ್. ನಾರಾಯಣ್ಣಪ್ಪನವರು ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ತಮ್ಮ ಲಿಖಿತ ಹೇಳಿಕೆಯಲ್ಲಿ ಅವರ ವಿರುದ್ಧದ ಅರೋಪಗಳನ್ನು ಒಪ್ಪಿಕೊಳ್ಳದೆ ಅಲ್ಲಗೆಳೆದಿರುತ್ತಾರೆ. ಆದುದರಿಂದ ಆರೋಪಿತ ಅಧಿಕಾರಿಯ ವಿರುದ್ಧದ ಆರೋಪಗಳು ಹಾಗೂ ಇದಕ್ಕೆ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯ ಸತ್ಯಾಸತ್ಯತೆಯನ್ನು

ಕಂಡುಕೊಳ್ಳುವ ದೃಷ್ಟಿಯಿಂದ ಮೇಲೆ (2)ರಲ್ಲಿ ಓದಲಾದ ದಿನಾಂಕ: 14–3–2008ರ ಆದೇಶದಲ್ಲಿ ಶ್ರೀ ಎನ್.ಎಸ್. ಸಂಗೊಳ್ಳಿ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಬೆಂಗಳೂರು ನಗರ ಜಿಲ್ಲೆಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಇಲಾಖಾ ವಿಚಾರಣೆ ಜರುಗಿಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು.

ವಿಚಾರಣಾ ಪ್ರಾಧಿಕಾರಿಗಳು ಮೇಲೆ (5)ರಲ್ಲಿ ಓದಲಾದ ದಿನಾಂಕ: 25–09–2008ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ಸಾಕ್ಷಿಗಳನ್ನು ಪರೀಕ್ಷಿಸಲಾಗಿದ್ದು, ಯಾವ ಸಾಕ್ಷಿಯು ಆರೋಪಗಳು ಸಮರ್ಥನೆಯಾಗಿ ಮಾಡಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಇದಲ್ಲದೇ, ಈ ಆರೋಪಗಳ ವಿರುದ್ಧ ಸದರಿ ಅಧಿಕಾರಿಯವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂ: 3472/2005 ಪ್ರಶ್ನಿಸಿದ್ದು ಮೇಲೆ ಓದಲಾದ (6)ರ ದಿನಾಂಕ: 31–07–2008ರ ತೀರ್ಪಿನಲ್ಲಿ ಪ್ರಸ್ತಾಪಿತ ವಿಚಾರಣೆಯನ್ನು ರದ್ದುಪಡಿಸಿ, ಇವರಿಗೆ ಸಿಗತಕ್ಕ ಎಲ್ಲಾ ನಿವೃತ್ತಿ ಸೌಲಭ್ಯಗಳನ್ನು ನೀಡಲು ಆದೇಶಿಸಲಾಗಿದೆ. ಈ ಆದೇಶದ ಹಿನ್ನೆಲೆಯಲ್ಲಿ ಈ ಇಲಾಖಾ ವಿಚಾರಣೆ ಊರ್ಜಿತವಲ್ಲವೆಂದು ವಿಚಾರಣಾಧಿಕಾರಿಗಳು ನಿರ್ಣಯಿಸಿರುತ್ತಾರೆ. ಆದುದರಿಂದ ಮೇಲ್ಕಂಡ ಅಧಿಕಾರಿಯನ್ನು ಈ ಆಪಾದನೆಯಿಂದ ಕೈಬಿಡಲು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 18 ಎಡಿಇ 2004, ಬೆಂಗಳೂರು, ದಿನಾಂಕ: 15ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರವು ವಿಚಾರಣಾಧಿಕಾರಿಗಳ ವರದಿ ಹಾಗೂ ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂ: 3472/2005ರಲ್ಲಿ ದಿನಾಂಕ: 31–07–2008 ರಲ್ಲಿ ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ಶ್ರೀ ಕೆ.ಎನ್. ನಾರಾಯಣಪ್ಪ, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಹೂಡಲಾದ ಇಲಾಖಾ ವಿಚಾರಣೆಯನ್ನು ಕೈ ಬಿಟ್ಟು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1296 **ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** 2009–10ನೇ ಸಾಲಿನಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಕ್ಷೇತ್ರಗಳ ಉನ್ನತೀಕರಣ ಕೆಲಸ ಕಾರ್ಯಗಳಿಗಾಗಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (KBITS), ಸಂಸ್ಥೆಗೆ ಅನುದಾನ ಬಿಡುಗಡೆ ಬಗ್ಗೆ

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ30 ಎಡಿಎಂ 2009, ದಿನಾಂಕ 12–5–09.

2) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸೇವೆಗಳು, ಪತ್ರ ಸಂಖ್ಯೆ ಕೆಬಿಟ್ಸ್/ಎಸಿಟಿ/09.10 ದಿ:16–04–09.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ ಉನ್ನತೀಕರಣದ ಲೆಕ್ಕ ಶೀರ್ಷಿಕೆ **'3451–00–090–2–01–ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ಖರ್ಚುಗಳು–(ಯೋಜನೆ)'** ಇದರ ಅಡಿಯಲ್ಲಿ 2009–10ನೇ ಸಾಲಿಗೆ ಒದಗಿಸಲಾಗಿದ್ದ ರೂ. 920.00 ಲಕ್ಷಗಳ ಆನುದಾನದಲ್ಲಿ ಬೆಂಗಳೂರು ಐಟಿ ಇನ್ 2009 ಮತ್ತು ಬೆಂಗಳೂರು ಬಯೋ 2009 ಇವೆಂಟ್ಸ್‌ಗಳನ್ನೊಳಗೊಂಡಂತೆ ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಚಟುವಟಿಕೆಗಳಿಗೆ ರೂ. 289.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸೇವೆಗಳು, ಇವರು ತಮ್ಮ ಪತ್ರದಲ್ಲಿ ವಿವರಿಸಿರುವಂತೆ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (KBITS) ಸಂಸ್ಥೆಯ ವ್ಯಾಪ್ತಿಯಲ್ಲಿ 2009–10ನೇ ಸಾಲಿಗೆ ಸಂಬಂಧಿಸಿದಂತೆ ಬೆಂಗಳೂರು ಬಯೋ–2009, ಬೆಂಗಳೂರು ಐಟಿ ಬಿಜ್–2009, 2009–10ನೇ ಸಾಲಿನಲ್ಲಿ ನಡೆಯಲಿರುವ ಮಾಹಿತಿ ತಂತ್ರಜ್ಞಾನ ಹಾಗೂ ಜೈವಿಕ ತಂತ್ರಜ್ಞಾನಕ್ಕೆ ಸಂಬಂಧಿಸಿದ ಅಂತರರಾಷ್ಟ್ರೀಯ ಸಮ್ಮೇಳನ / ವಸ್ತು ಪ್ರದರ್ಶನಗಳಲ್ಲಿ ಭಾಗವಹಿಸಲು ಮಾಹಿತಿ ತಂತ್ರಜ್ಞಾನ ಉನ್ನತಿಕರಣದ ಲೆಕ್ಕ ಶೀರ್ಷಿಕೆಯಲ್ಲಿ ರೂ. 100.00 ಲಕ್ಷಗಳ ಹಣ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 19 ಅಚವಿ 2009, ಬೆಂಗಳೂರು, ದಿನಾಂಕ: 21ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ 2009–10ನೇ ಸಾಲಿನಲ್ಲಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (KBITS) ಸಂಸ್ಥೆಯ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಕ್ಷೇತ್ರಗಳ ಉನ್ನತೀಕರಣ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ಹಮ್ಮಿಕೊಂಡಿರುವ ಕಾರ್ಯ ಚಟುವಟಿಕೆಗಳಿಗಾಗಿ ರೂ. 100.00 ಲಕ್ಷ (ನೂರು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **3451–00–090–2–01–ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ಖರ್ಚುಗಳು–(ಯೋಜನೆ)** ಇದರ ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಅಪರ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (ಯೋಜನೆ) ಇವರಿಂದ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶಗಳ ಸಂಖ್ಯೆ: ಎಫ್.ಡಿ. 01 ಟಿಎಫ್‌ಪಿ 2008, ದಿನಾಂಕ:16.05.2008 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 1297 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ವಿಭಾಗದ ಹುಕ್ಕೇರಿ ತಾಲ್ಲೂಕಿನ ಸಂಕೇಶ್ವರ ಪಟ್ಟಣದ ಪರಿಮಿತಿಯಲ್ಲಿ ಬರುವ ಪುಣಾ–ಬೆಂಗಳೂರು ರಾಷ್ಟ್ರೀಯ ಹೆದ್ದಾರಿ–4ರ ಹಳೇ ಸರಪಳಿ 549.25 ರಿಂದ 55.25 (ಕಿ.ಮೀ 0.00 ರಿಂದ 6.00) ರವರೆಗೆ ರಾಷ್ಟ್ರೀಯ ಹೆದ್ದಾರಿ ಇಲಾಖೆಯ ಉಳಿಕೆ ಭಾಗದ (Abandoned Road) ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಕೆಳದರ್ಜೆಗೊಳಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪತ್ರಸಂಖ್ಯೆ: ಸಿಬಿಎನ್/ಹೈಆ್ಯಸೆ/ಕ.ಸಂ.7/5/ಹುಕ್ಕೇರಿ/ಎನ್‌ಹೆಚ್–4/ಉಭಾಅ/08–09/13226, ದಿನಾಂಕ:4–2–2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರು ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ವಿಭಾಗದ ಹುಕ್ಕೇರಿ ತಾಲ್ಲೂಕಿನ ಸಂಕೇಶ್ವರ ಪಟ್ಟಣದ ಪರಿಮಿತಿಯಲ್ಲಿ ಬರುವ ಪುಣಾ–ಬೆಂಗಳೂರು ರಾಷ್ಟ್ರೀಯ ಹೆದ್ದಾರಿ–4ರ ಹಳೇ ಸರಪಳಿ 549.25 ರಿಂದ 55.25 (ಕಿಮೀ.0.00 ರಿಂದ 6.00) ರವರೆಗೆ ರಾಷ್ಟ್ರೀಯ ಹೆದ್ದಾರಿ ಇಲಾಖೆಯ ಉಳಿಕೆ ಭಾಗದ (Abandoned Road) ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಕೆಳದರ್ಜೆಗೊಳಿಸುವುದು ಅವಶ್ಯವಾಗಿದೆ ಎಂದು ವರದಿ ಮಾಡಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 249 ಸಿಆರ್‌ಎಂ 2009, ಬೆಂಗಳೂರು, ದಿನಾಂಕ: 11ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ, **ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ವಿಭಾಗದ ಹುಕ್ಕೇರಿ ತಾಲ್ಲೂಕಿನ ಸಂಕೇಶ್ವರ ಪಟ್ಟಣದ ಪರಿಮಿತಿಯಲ್ಲಿ ಬರುವ ಪುಣಾ–ಬೆಂಗಳೂರು ರಾಷ್ಟ್ರೀಯ ಹೆದ್ದಾರಿ–4ರ ಹಳೇ ಸರಪಳಿ 549.25 ರಿಂದ 55.25 (ಕಿಮೀ 0.00 ರಿಂದ 6.00) ರವರೆಗೆ ರಾಷ್ಟ್ರೀಯ ಹೆದ್ದಾರಿ ಇಲಾಖೆಯ ಉಳಿಕೆ ಭಾಗದ (Abandoned Road)** ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಕೆಳದರ್ಜೆಗೊಳಿಸಿ, ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ರೇವಣ್ಣ**

ಪಿ.ಆರ್. 1298 ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

## COMMERCE AND INDUSTRIES SECRETARIAT

**Sub:** Appointment of Sri V.Madhu, IAS, Principal Secretary, Infrastructure Development Department, Vikasa Soudha, Bangalore, as one of the Director on the Board of Directors of KTPO.

**Read:** 1. Notification No. CI DPAR 215 S.A.S.2009 dated 02.05.009.

2. Letter No. KTPO/174/466/2009-10 dated 05.05.2009 of Managing Director, KTPO Bangalore.

**PREAMBLE:**

Sri Aravind Jadhav, IAS the then Principal Secretary, Infrastructure Development Department, Vikasa Soudha, Bangalore, was appointed as a Director on the Board of KTPO. Since he has been transferred to Central Government, vide Notification read at (1) above the present Principal Secretary, Infrastructure Development Department, Vikasa Soudha, Bangalore, Sri V.Madhu, IAS is to be appointed as a Director of KTPO Board. The Managing Director, KTPO has requested to appoint new Director vide his letter read at (2) above. The matter has been examined by Govt. hence the following order.

**Government Order No. CI 3 SPI 2009 Bangalore, Dated 18th May 2009**

Government is pleased to appoint Sri V.Madhu, IAS, Principal Secretary, Infrastructure Development Department, Vikasa Soudha, Bangalore, as one of the Directors on the Board of Directors of Karnataka Trade Promotion Organisation [KTPO] in place of Sri Aravind Jadhav IAS with immediate effect and until further orders.

By Order and in the name of the Governor of Karnataka,

P.R. 1299

**APARNA PAVATE**

Desk Officer [Technical Cell], Commerce & Industries Department

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 15 ಸಸಿವಿ 2001 ದಿನಾಂಕ: 20–04–2001.

2) ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 04 ಸಸಿವಿ 2002 ದಿನಾಂಕ: 04–04–2002.

3) ಸರ್ಕಾರದ ಆದೇಶ ಸಂಖ್ಯೆ :ಸಿಆಸುಇ 581 ಸಅಸೇ 2008 ದಿನಾಂಕ: 24–07–2008.

4) ಪ್ರಧಾನ ಕಾರ್ಯದರ್ಶಿಗಳು (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ), ಕೃಷಿ ಮತ್ತು ತೋಟಗಾರಿಕೆ ಇಲಾಖೆ ಇವರ ಟಿಪ್ಪಣಿ ಸಂಖ್ಯೆ:ಕೃತೋಇ 91 ಪ್ರಕಾ (ಆಸಂ) 2009 ದಿ:05.05.2009.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ಮತ್ತು (2) ರಲ್ಲಿ ಓದಲಾಗಿರುವ ಸರ್ಕಾರದ ಆದೇಶ ದಿನಾಂಕ:20–04–2001 ಹಾಗೂ 04–04–2002 ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಸೃಜಿಸಲಾಯಿತು ಹಾಗೂ ಅದು ಕಾಲಕಾಲಕ್ಕೆ ಮುಂದುವರಿಸಲ್ಪಟ್ಟು ಅಂತಿಮವಾಗಿ ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 24–07–2008ರ ಸರ್ಕಾರಿ ಆದೇಶದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ:06–07–2008 ರಿಂದ ದಿನಾಂಕ:05–07–2009 ರವರೆಗೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸಹ ದಿನಾಂಕ: 01–04–2007 ರಿಂದ ದಿನಾಂಕ: 05–07–2009 ರವರೆಗೆ ಮುಂದುವರಿಸಲಾಗಿದೆ.

ಮೇಲೆ ಕ್ರಮಸಂಖ್ಯೆ (4) ರಲ್ಲಿ ಓದಲಾದ ಪ್ರಧಾನ ಕಾರ್ಯದರ್ಶಿ ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ ಕೃಷಿ ಮತ್ತು ತೋಟಗಾರಿಕೆ ಇಲಾಖೆ ಇವರು ದಿನಾಂಕ:05–05–2009ರ ಟಿಪ್ಪಣಿಯಲ್ಲಿ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 06–07–2009 ರಿಂದ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 257 ಸಅಸೇ 2009, ಬೆಂಗಳೂರು, ದಿನಾಂಕ: 21ನೇ ಮೇ 2009**

ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ:06–07–2009 ರಿಂದ ದಿನಾಂಕ:05–07–2010 ರವರೆಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

ಪಿ.ಆರ್. 1300

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 42 ಆಸೇವ 2008, ಬೆಂಗಳೂರು, ದಿನಾಂಕ: 16ನೇ ಮೇ 2009**

ಕೆ.ಎ.ಎಸ್. ಹಿರಿಯ ಶ್ರೇಣಿ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಸಂಖ್ಯೆ: ಸಿಆಸುಇ 6 ಎಸ್‌ಕೆಜಿ 96 ದಿನಾಂಕ:23.03.96 ರಲ್ಲಿ ಪ್ರಕಟಿಸಲಾಗಿದೆ. ಈ ಪಟ್ಟಿಯ ಪ್ರಕಾರ ಶ್ರೀ ಎಂ.ಇ.ಶಿವಲಿಂಗಮೂರ್ತಿ, ಕೆ.ಎ.ಎಸ್. ಹಿರಿಯ ಶ್ರೇಣಿ ಅಧಿಕಾರಿ ಇವರ ಜೇಷ್ಠತಾ ಕ್ರಮ ಸಂಖ್ಯೆ:265 ಆಗಿದ್ದು ಇವರಿಗೆ ದಿನಾಂಕ:23–04–96 ರಂದು ಆಯ್ಕೆ ಶ್ರೇಣಿ ವೃಂದಕ್ಕೆ ಬಡ್ತಿ ನೀಡಲಾಗಿದೆ. ಇದೇ ತಾತ್ಕಾಲಿಕ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ:302 ರಲ್ಲಿದ್ದ ಶ್ರೀ ಕೆ.ಟಿ.ತಿಮ್ಮಾರೆಡ್ಡಿ ಇವರಿಗೆ ಬಡ್ತಿಯ ಪರಿಗಣನಾ ವಲಯದಲ್ಲಿ ಇರಲಿಲ್ಲವಾದ್ದರಿಂದ ಆಯ್ಕೆ ಶ್ರೇಣಿ ವೃಂದಕ್ಕೆ ಬಡ್ತಿಗೆ ಪರಿಗಣಿಸಿರಲಿಲ್ಲ. ನಂತರ ಹಿರಿಯ ಶ್ರೇಣಿ ವೃಂದದ ಪರಿಷ್ಕೃತ ಜೇಷ್ಠತಾ ಪಟ್ಟಿಯನ್ನು ಸಂಖ್ಯೆ:ಸಿಆಸುಇ 2 ಎಸ್‌ಕೆಜಿ 2000 ದಿನಾಂಕ:19–5–2000ರಲ್ಲಿ ಹಾಗೂ ಅಧಿಸೂಚನೆ ಸಂಖ್ಯೆ:ಸಿಆಸುಇ 2 ಎಸ್‌ಕೆಜಿ 2000 ದಿನಾಂಕ:9–11–04ರಲ್ಲಿ ಅಂತಿಮಗೊಳಿಸಿದ್ದು, ಅದರಲ್ಲಿ ಶ್ರೀ ಕೆ.ಟಿ.ತಿಮ್ಮಾರೆಡ್ಡಿ ಇವರ ಜೇಷ್ಠತಾ ಕ್ರಮ ಸಂಖ್ಯೆ:314 ಆಗಿದ್ದು, ಶ್ರೀ ಎಂ.ಇ.ಶಿವಲಿಂಗಮೂರ್ತಿ ಇವರ ಜೇಷ್ಠತಾ ಕ್ರಮ ಸಂಖ್ಯೆ:323 ಆಗಿದೆ.

ಈ ಹಿನ್ನೆಲೆಯಲ್ಲಿ ಶ್ರೀ ಕೆ.ಟಿ. ತಿಮ್ಮಾರೆಡ್ಡಿ ಇವರಿಗೆ ದಿನಾಂಕ: 14–11–2000 ರಂದು ಕೆ.ಎ.ಎಸ್. ಆಯ್ಕೆ ಶ್ರೇಣಿ ವೃಂದಕ್ಕೆ ಬಡ್ತಿ ನೀಡಲಾಗಿದೆ. ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಮುಂಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ಅಧಿನಿಯಮ 1973 ರ ಸೆಕ್ಷನ್ 4 ರನ್ವಯ ಜೇಷ್ಠತಾ ಪಟ್ಟಿ ಅಂತಿಮಗೊಂಡ ನಂತರ ಬಡ್ತಿಯನ್ನು ಪುನರಾವಲೋಕನ ಮಾಡಲಾಗಿದ್ದು, ಶ್ರೀ ಕೆ.ಟಿ.ತಿಮ್ಮಾರೆಡ್ಡಿ ಇವರ ಜೇಷ್ಠತಾ ಕ್ರಮ ಸಂಖ್ಯೆ:314 ಆಗಿದ್ದು, ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಎಂ.ಇ.ಶಿವಲಿಂಗಮೂರ್ತಿ, ಜೇಷ್ಠತಾ ಕ್ರಮ ಸಂಖ್ಯೆ: 323 ಇವರಿಗೆ ಕೆ.ಎ.ಎಸ್. ಆಯ್ಕೆ ಶ್ರೇಣಿ ವೃಂದಕ್ಕೆ ಬಡ್ತಿ ನೀಡಿದ ದಿನಾಂಕ: 23–04–96 ರಿಂದಲೇ ಅನ್ವಯವಾಗುವಂತೆ ಕೆ.ಎ.ಎಸ್. ಆಯ್ಕೆ ಶ್ರೇಣಿ ವೃಂದದಲ್ಲಿ ಅರ್ಹತಾ ದಿನಾಂಕವನ್ನು ನಿಗದಿಪಡಿಸಲಾಗಿದೆ. ಅದರಂತೆ ಇವರ ಅರ್ಹತಾ ದಿನಾಂಕದಿಂದಲೇ ಇವರ ವೇತನವನ್ನು ಕಾಲ್ಪನಿಕವಾಗಿ ನಿಗದಿಪಡಿಸಲು ಆದೇಶಿಸಲಾಗಿದೆ. ಮೇಲ್ಕಂಡ ಅಧಿನಿಯಮ ಸೆಕ್ಷನ್ 4 ರ ಪ್ರಕಾರ ಅರ್ಹತಾ ದಿನಾಂಕದ ಆಧಾರದ ಮೇಲೆ ವೇತನವನ್ನು ಕಾಲ್ಪನಿಕವಾಗಿ ನಿಗದಿಪಡಿಸುವುದರಿಂದ ಅಧಿಕಾರಿಯು ವೇತನ ಬಾಕಿಗೆ ಅರ್ಹರಾಗುವುದಿಲ್ಲ.

ಶ್ರೀ ಕೆ.ಟಿ. ತಿಮ್ಮಾರೆಡ್ಡಿ, ಇವರು ಈಗಾಗಲೇ ದಿನಾಂಕ:31–07–2002 ರಂದು ಸೇವೆಯಿಂದ ನಿವೃತ್ತರಾಗಿರುವುದರಿಂದ ಇವರ ಪಿಂಚಣಿ ಹಾಗೂ ಇತರ ಸೌಲಭ್ಯಗಳನ್ನು ಕರ್ನಾಟಕ ನಾಗರೀಕ ಸೇವಾ (ಮುಂಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ಅಧಿನಿಯಮ 1973ರ ಸೆಕ್ಷನ್ 6 ರ ಪ್ರಕಾರ ನಿಗಧಿಪಡಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2)

ಪಿ.ಆರ್. 1301

**INFORMATION TECHNOLOGY, BIOTECHNOLOGY & SCIENCE & TECHNOLOGY SECRETARIAT**

**Sub:** Implementation of paperless office project in ITBT Departments- constitution of steering committee and Evaluation and Monitoring committee-reg.

**Preamble:**

In order to enhance the efficiency and to introduce better transparency, the Department to Information Technology, Biotechnology and Science and Technology intends to digitize all the paper work not only in IT, BT and S&T Secretariat but also in the organizations coming under the administrative

control of the Department i.e., Directorate of Information Technology and Biotechnology, Karnataka Biotechnology and Information Technology Services [KBITS], Karnataka State Remote Sensing Application Centre [KSRSAC], Karnataka Electronics Development Corporation Limited [KEONICS], Karnataka State Council for Science and Technology [KSCST], Karnataka Science and Technology Academy [KSTA], Jawaharlal Nehru Planetarium [JNP], Karnataka Rajya Vigyana Parishat [KRVP], Karnataka State Natural Disaster Monitoring Centre [KSNDMC], in consultation with the NIC of State unit.

In the meeting held on 12-05-2009, under the Chairmanship of Principal Secretary to Government, IT, BT and S & T, regarding implementation of PLO Project, it was decided to constitute (1) steering committee (2) Evaluation and Monitoring Committee under the chairmanship of Principal Secretary to Government, IT, BT and S & T and all other heads of the department working under IT secretariat, to monitor the implementation and evaluate the project for effective implementation of the PLO Project.

Accordingly, it is considered necessary to constitute a Steering Committee and Evaluation and Monitoring Committee for effective implementation and monitoring of Paperless [PLO] Project in the Department o IT, BT and S & T and its subordinate offices, hence the following order.

**Government Order No. ITD 22 MIS 2009, Bangalore, Dated: 23rd May 2009**

In the circumstances explained in the preamble, Government are pleased to constitute Steering Committee and Evaluation and Monitoring Committee for effective implementation and Monitoring Paperless [PLO] Project in the Department of IT, BT and S & T as Detailed below.

**STEERING COMMITTEE:**

| | | |
|---|---|---|
| 1 | Director, Department of Information Technology and Bio Technology | Chairman |
| 2 | Executive Director, KBITS | Member |
| 3 | Director {operations] KEONICS | Member |
| 4 | Administrative Officer , KSRSAC | Member |
| 5 | The Deputy Secretary to Government IT and BT | Member |
| 6 | Sri Bhavikatti, Senior Programmer, KEONICS | Member Secretary |
| 7 | Sri C. Tangavelu, Technical Director, NIC | Member |

**EVALUATION AND MONITORING COMMITTEE:**

| | | |
|---|---|---|
| 1 | Principal Secretary to Government, IT BT and S & T Department | Chairman, |
| 2 | The Director, IT BT | Member |
| 3 | Prof Krishnamurthy, IISC, Bangalore | Member |
| 4 | Managing Director, KEONICS | Member |
| 5 | Director, S & T (Technical) | Member |
| 6 | Director, KSNDMC | Member |
| 7 | Administrator, JNP | Member |
| 8 | Secretary, KRVP | Member |
| 9 | Secretary, KSCST | Member |
| 10 | OSD, IT, BT | Member Secretary |
| 11 | Deputy secretary, IT, BT | Member |
| 12 | Deputy Secretary, S & T | Member |
| 13 | Sri Bahvikatti, Senior Programmer, KEONI | Member |

The Streeing Committee on Paperless Project shall take all possible steps to steer the implementation of the project, provide leadership to E-Governance. The committee shall conduct meeting once in a month and send periodical report to Government in the prescribed format.

Evaluation and Monitoring Committee will meet once in two months, table the report sent by the steering committee, analyse the defficulty / problems faced in implementing the project and suggest remedial, measures to overcome the problems. Deputy Secretary, IT BT and also Deputy secretary, S & T will submit the report of action, regarding release funds & etc.,

By Order and in the name of the Governor of Karnataka,

**M.V. KRISHNAMURTHY**

P.R. 1302

Under secretary to Government,

Information Technology, Biotechnology and Science and Technology Department.

**ಇಂಧನ ಸಚಿವಾಲಯ**

**ವಿಷಯ:** ಮೆ:: Farmers Wind Power Resources Pvt. Ltd. ಕಂಪನಿಯವರಿಗೆ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ ಆದೇಶ.

**ಓದಲಾಗಿದೆ:**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/ 08/KWF/2009/102 ಮತ್ತು ಕೆಆರ್ಇಡಿ/08/KWF/ 2009/493 ದಿನಾಂಕ: 09.01.2009 ಮತ್ತು 25/28.03.2008.
2. ದಿನಾಂಕ: 13.01.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: Farmers Wind Power Resources Pvt. Ltd. (ಮೊದಲಿನ ಹೆಸರು ಮೆ:: ಕೃಷ್ಣ ವಿಂಡ್ ಫಾರ್ಮ್) ಕಂಪನಿಗೆ ಗದಗ್ ಜಿಲ್ಲೆಯಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ದಿನಾಂಕ: 13.01.2009 ರಂದು ನಡೆದ ಹಂಚಿಕೆ ಸಮಿತಿ ಮುಂದೆ ಇಡಲಾಗಿದ್ದು, ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಅನುಮೋದಿತವಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ : –

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 228 ಎನ್‌ಸಿಇ 2008, ಬೆಂಗಳೂರು, ದಿನಾಂಕ: 19ನೇ ಮೇ 2009.**

ಮೆ:: Farmers Wind Power Resources Pvt. Ltd. ಕಂಪನಿಗೆ ಗದಗ್ ಜಿಲ್ಲೆಯಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ : –

| Proposed capacity in MW | Near by villages of the proposed area and district. | Geographical area description of the project |
|---|---|---|
| 10.00MW | Hulkoti, Kurtkoti, Benturu, Gadag Disrtict. | The applicant has proposed his and his family lands for the development of wind power project. However, this area had already been geographically allotted to M/s Enercon (I) Ltd., and the Western part of the same area is also applied by other applicant. However, on the basis of claim of ownership by the applicant his application accounted. The area is completely plain area and is held in the following Geographical co-ordinates:- **Latitude:** 15 23'10"- 15 24'4" N **Longitude:** 75 31'33"- 75 32'59" E |
| **Total** | **10.00 MW** | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ. 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ & ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ದಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.

12. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1303

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: Mysore Mercantile Co. Ltd. ಕಂಪನಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ವರಾಹಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/06/ವರಾಹಿ/07/1937 ದಿನಾಂಕ: 22/30.08.2007.

2 ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: Mysore Mercantile Co. Ltd. ಕಂಪನಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಹೊಸಗಡ್ಡೆ ಗ್ರಾಮದ ಬಳಿ ವರಾಹಿ ನದಿಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ವರಾಹಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಅನುಮೋದನೆ ನೀಡಲಾಗಿದೆ. ಆದುದರಿಂದ, ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 302 ಎನ್‌ಸಿಇ 2007, ಬೆಂಗಳೂರು, ದಿನಾಂಕ: 19ನೇ ಮೇ 2009.**

ಮೆ:: Mysore Mercantile Co. Ltd. ಕಂಪನಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಹೊಸಗಡ್ಡೆ ಗ್ರಾಮದ ಬಳಿ ವರಾಹಿ ನದಿಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ವರಾಹಿ ಕಿರು ಜಲ ವಿದ್ಯುತ್ ಯೋಜನೆಯನ್ನು (**Latitude:** 13 35'0" to 13 40'0", **Longitude**: 74 53'0" to 74 56'0") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8\. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9\. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12 ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1304

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: Mysore Mercantile Co. Ltd.ಕಂಪನಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಗುಂಡಬಲಹೊಳೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಗುಂಡಬಲಹೊಳೆ/07/1832 ದಿನಾಂಕ:29.06.2007/ 16.08.2007.

2 ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: Mysore Mercantile Co. Ltd. ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲ್ಲೂಕಿನ ಗುಂಡಬಲ ಗ್ರಾಮದ ಬಳಿ ಗುಂಡಬಲಹೊಳೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಗುಂಡಬಲಹೊಳೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಅನುಮೋದನೆ ನೀಡಲಾಗಿದೆ. ಆದುದರಿಂದ, ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 281 ಎನ್‌ಸಿಇ 2007, ಬೆಂಗಳೂರು, ದಿನಾಂಕ: 19ನೇ ಮೇ 2009**.

ಮೆ:: Mysore Mercantile Co. Ltd. ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲ್ಲೂಕಿನ ಗುಂಡಬಲ ಗ್ರಾಮದ ಬಳಿ ಗುಂಡಬಲಹೊಳೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಗುಂಡಬಲಹೊಳೆ ಕಿರು ಜಲ ವಿದ್ಯುತ್ ಯೋಜನೆಯನ್ನು (**Latitude**: 14 16'0" to 14 21'0", **Longitude**: 74 30'0" to 74 36'0") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8\. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9\. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12 ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1305

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

